# ಹಿಂದೂ ಮತದಲ್ಲಿ

# ಕುಲವಿವಕ್ಷ




**ಗ್ರಂಥಕರ್ತ : ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (೪೪) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**www.thraithashakam.org**



# ಹಿಂದೂ ಮತದಲ್ಲಿ ಕುಲ ವಿವಕ್ಷ


ಗ್ರಂಥಕರ್ತ : **ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**



ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 39 ಪ್ರಥಮ ಮುದ್ರಣ : ಏಪ್ರಿಲ್–2017

ಪ್ರತಿಗಳು : 1000 **ಬೆಲೆ. 65/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಗ್ರಾಹಿತ ಶಕ್ತಿ
121. ಭೌತಿಕಮು – ಅಭೌತಿಕಮು
122. ದೇವುನಿ ಆಜ್ಞ ಮರಣಂ
123. ಮತ ಸಾಮರಸ್ಯಂ
124. ಮೋಕ್ಷಮು – ಮೋಸಮು
125. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ** : ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635, 7619545963, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ) Cell :**9632418716**

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾನಗರ,ತೊಣಚಿಕೊಪ್ಪಲ್,ಮೈಸೂರ್
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಪ್ರಕಾಶ್ ರೆಡ್ಡಿ**
ಸೆಲ್:9845656774,9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಹಿಂದೂ ಮತದಲ್ಲಿ ಕುಲ ವಿವಕ್ಷ

ಮತ ಮಧ್ಯದಲ್ಲಿ ಹುಟ್ಟಿರುವುದು. ಕುಲ ಗುಣಾದಿಯಲ್ಲಿಯೇ ಹುಟ್ಟಿದೆ. ಮನುಷ್ಯ ಹುಟ್ಟಿದ ನಂತರ ಶಿಶುದಶೆ ಸ್ವಲ್ಪಕಾಲ ಇರುತ್ತದೆ. ಶಿಶುದಶೆ ಹೋದ ನಂತರ ಬಾಲ್ಯದಶೆ ಬರುತ್ತದೆ. ಶಿಶುದಶೆಯಲ್ಲಿ ಏನು ತಿಳಿಯದ ಸ್ಥಿತಿಯಲ್ಲಿ, ಯಾವ ವಿಚಕ್ಷಣೆ ಇಲ್ಲದ ಸ್ಥಿತಿಯಲ್ಲಿ ಮನುಷ್ಯ ಇರುತ್ತಾನೆ. ಆಗ ಶರೀರದಲ್ಲಿನ ಬುದ್ಧಿ, ಮನಸ್ಸು ಎಳೆಯದಾಗಿರುವುದರಿಂದ, ಆ ಎರಡೂ ಪೂರ್ತಿ ಕೆಲಸ ಮಾಡದ ಸ್ಥಿತಿಯಲ್ಲಿ ಇರುತ್ತವೆ. ಶಿಶು ದಶೆಯಲ್ಲಿಯೇ ಸ್ವಲ್ಪಕಾಲ ನಡೆದಾಗ, ಆರು ಇಲ್ಲವೆ ಏಳು ತಿಂಗಳಿಂದ ಮನಸ್ಸು ಕೆಲಸ ಮಾಡಲು ಶುರು ಮಾಡುತ್ತದೆ. ಅಲ್ಲಿಯವರೆಗು ಶಿಶುದಶೆಯಲ್ಲಿ ಶಿಶುವನ್ನು ಆತ್ಮವೇ ನಡೆಸುತ್ತಿದೆ. ಮನಸ್ಸು ಸ್ವಲ್ಪ ಬಲಿದಂತೆಲ್ಲ ನಿಧಾನವಾಗಿ ಕೆಲಸಮಾಡುವುದಕ್ಕೆ ಶುರು ಮಾಡುತ್ತದೆ. ಶರೀರದಲ್ಲಿ ಮೊದಲು ಕೆಲಸ ಮಾಡುವುದಕ್ಕೆ ಶುರು ಮಾಡುವುದು ಮನಸ್ಸೆ. ನಂತರ ಕೆಲಸ ಮಾಡುವುದಕ್ಕೆ ಸಾಮರ್ಥ್ಯ ಹೊಂದಿರುವುದು ಬುದ್ಧಿ. ಮರಣಿಸುವಾಗ ಕೂಡಾ ಕೊನೆಯದಾಗಿ ಮೊದಲು ಬುದ್ಧಿ ನಿಂತುಹೋಗಿ ನಂತರ ಮನಸ್ಸು ನಿಂತುಹೋಗುತ್ತಿದೆ. ಮನಸ್ಸು ನಿಂತುಹೋದರೇನೇ ಮರಣ ಆಗುತ್ತದೆ.

ಮನುಷ್ಯ ಹುಟ್ಟಿದ ನಂತರ ಮೊದಲು ಕೆಲಸ ಮಾಡುವುದು ಮನಸ್ಸು. ಕೆಲವು ದಿನಗಳ ನಂತರ ಬುದ್ಧಿ ಕೆಲಸ ಮಾಡುವುದು ಆರಂಭಮಾಡುತ್ತದೆ. ನಂತರ ಅಹಂ, ಆ ನಂತರ ಚಿತ್ತವು ಕೆಲಸ ಮಾಡುವುದು ಆರಂಭಮಾಡುತ್ತದೆ. ಮನಸ್ಸು, ಬುದ್ಧಿ, ಚಿತ್ತ, ಅಹಮ್ ಕೆಲಸ ಮಾಡುವವರೆಗು ಅವುಗಳ ಕೆಲಸವನ್ನು ಕೂಡಾ ಶರೀರದಲ್ಲಿನ ಆತ್ಮವೇ ಮಾಡುತ್ತಿರುತ್ತದೆ. ಶರೀರದಲ್ಲಿ ಗುಣಗಳು ಬದಲಾಗದೆ ಗತಜನ್ಮದಲ್ಲಿರುವ ಗುಣಗಳೇ ಇರುತ್ತವೆ. ಗುಣಗಳು, ಜೀವಾತ್ಮ, ಆತ್ಮ, ಕರ್ಮ ಎಲ್ಲವೂ ಗತ ಜನ್ಮದಲ್ಲಿನವೇ ಎರಡನೆ ಜನ್ಮಕ್ಕೆ ಬಂದಿರುತ್ತವೆ. ಅವುಗಳಲ್ಲಿ ಯಾವುದರಲ್ಲೂ ಯಾವ ಬದಲಾವಣೆ ಇರುವುದಿಲ್ಲ. ಕಾಲ, ಕರ್ಮ, ಗುಣಚಕ್ರದಲ್ಲಿನವು ಮತ್ತು ಶರೀರ ಬದಲಾವಣೆಯಾಗುತ್ತಿವೆ ಹೊರತು ಅದರಲ್ಲಿ ಯಾವ ವ್ಯತ್ಯಾಸಗಳು ಇಲ್ಲ. ಶಿಶು ಶರೀರ ದೊಡ್ಡದಾಗಿ ಬಾಲ್ಯದೊಳಗೆ ಬರುತ್ತಲೇ

ಅಂದರೇ ಹುಟ್ಟಿದ ನಂತರ ಒಂದು ವರ್ಷದವರೆಗು ಶಿಶುದಶೆ ನಡೆದರೆ ವರ್ಷದ ನಂತರ ಬಾಲ್ಯದಶೆ ಆರಂಭವಾಗುತ್ತದೆ. ಆಗ ಹೊಸದಾಗಿ ಹುಟ್ಟಿದ ಮನಸ್ಸು, ಬುದ್ಧಿ, ಚಿತ್ತ, ಅಹಮ್ ಎನ್ನುವ ನಾಲ್ಕು ಅಂತಃಕರಣಗಳು ಸ್ವಲ್ಪಸ್ವಲ್ಪವಾಗಿ ಕೆಲಸ ಮಾಡುವುದು ಆರಂಭಮಾಡುತ್ತವೆ. ಶರೀರದಲ್ಲಿನ 24 ಭಾಗಗಳೆಲ್ಲವು ಹೊಸದಾಗಿ ಹುಟ್ಟಿರುವುದರಿಂದ ಬಾಲ್ಯದಿಂದ ಎಲ್ಲಾ ಹೊಸದಾಗಿ ಕೆಲಸಮಾಡಲು ಆರಂಭಮಾಡುತ್ತವೆ. ಶರೀರದಲ್ಲಿನ ಗುಣಗಳು ಹುಟ್ಟುವವು ಅಲ್ಲ, ಸಾಯುವವು ಅಲ್ಲ. ಗತ ಶರೀರದಲ್ಲಿ ಇರುವವೇ ಇರುತ್ತವೆ. ಆದ್ದರಿಂದ ಗುಣಗಳು ಪೂರ್ತಿ ಸ್ಥಾಯಿಯಲ್ಲಿ ಕೆಲಸ ಮಾಡುವ ಸಾಮರ್ಥ್ಯ ಹೊಂದಿವೆ. ಆದರೆ ಗುಣಗಳ ಭಾವವನ್ನು ಗ್ರಹಿಸಿಕೊಳ್ಳುವ ಬುದ್ಧಿಯೇ ಕೆಲಸ ಮಾಡಲಾರದೆಹೋಗುವುದರಿಂದ ಗುಣಗಳ ಪ್ರಾಬಲ್ಯ ಬಾಲ್ಯದಶೆಯಲ್ಲಿ ಕಾಣಿಸುವುದಿಲ್ಲ.

ಮನುಷ್ಯ ಬಾಲ್ಯದಶೆಯಲ್ಲಿ ಇರುವಾಗಲೇ ಐದು ವರ್ಷಗಳಿಂದ ಗುಣಗಳ ಭಾವನೆಗಳನ್ನು ಬುದ್ಧಿ ಗ್ರಹಿಸುವುದಕ್ಕೆ ಆರಂಭ ಮಾಡುತ್ತಿದೆ. ಆಗಲೇ ಹಿಂದೂ ಮತದಲ್ಲಿರುವ ಅವರೆಲ್ಲರಲ್ಲಿಯೂ ಗುಣಾದಿಯಲ್ಲಿಯೇ ನನ್ನದು ಇಂತಹ ಕುಲ ಎನ್ನುವ ಭಾವನೆ ಬರುತ್ತಿದೆ. ಗುಣಗಳು ಮೊದಲು ಕೆಲಸಮಾಡಲು ಶುರು ಮಾಡಿದಾಗ, ಹಿರಿಯರನ್ನು ನೋಡಿ ಮಕ್ಕಳು ಕೂಡಾ ಕುಲ ಭಾವನೆಯನ್ನು ಹೊಂದುತ್ತಿದ್ದಾರೆ. ನಾನು ಐದು ವರ್ಷಗಳ ಚಿಕ್ಕಂದಿನಲ್ಲಿಯೇ, ಏನು ತಿಳಿಯದ ವಯಸ್ಸಿನಲ್ಲಿಯೇ ಕುಡಿಯುವ ನೀರನ್ನು ಇತರರು ಕೇಳಿದಾಗ ಮನೆಯಲ್ಲಿನ ಹಿರಿಯರು ನೀರು ಕೇಳಿದವರ ಕುಲವನ್ನನುಸರಿಸಿ ಗ್ಲಾಸಿನಿಂದ ನೀರು ಕೊಡುವುದು, ಇಲ್ಲದಿದ್ದರೆ ಚೆಂಬಿನಿಂದ ಎತ್ತಿ ನೀರನ್ನು ಹೊಯ್ಯುವುದು ನಡೆಯುತ್ತಿತ್ತು. ನಮ್ಮ ಮನೆ ಊರಿನ ಹೊರಗಡೆ ಇರುವುದರಿಂದ ಹೊಲದಲ್ಲಿ ಕೆಲಸ ಮಾಡುವವರು ಬಂದು ಕುಡಿಯುವ ನೀರನ್ನು ಕೇಳುತ್ತಿದ್ದರು. ಹೆಚ್ಚಾಗಿ ಮಾದಿಗ ಕುಲದವರು ಬಂದು ಕೇಳುತ್ತಿದ್ದರು. ಆಗ ಅವರ ಬೊಗಸೆಯೊಳಗೆ ನೀರು ಹೊಯ್ದರೆ, ಅವರು ಬಗ್ಗಿ ಕೈಗಳಲ್ಲಿ ನೀರನ್ನು ಕುಡಿಯುತ್ತಿದ್ದರು. ಅವರ ಕೈಗೆ ಚೆಂಬಾಗಲಿ, ಗ್ಲಾಸಾಗಲಿ ಕೊಡುತ್ತಿರಲಿಲ್ಲ. ಅವೆಲ್ಲಾ ಪ್ರತ್ಯಕ್ಷವಾಗಿ

ನೋಡುವುದರಿಂದ ಮಾದಿಗರು ನಮಗಿಂತ ಕಡಿಮೆ ಕುಲದವರೆಂದು, ಅವರನ್ನು ತಾಕಬಾರದೆಂದು ಅವರು ಚೆಂಬನ್ನಾಗಲಿ, ಗ್ಲಾಸನ್ನಾಗಲಿ ಮುಟ್ಟಿಕೊಂಡರೆ ಪುನಃ ಅದನ್ನು ತಕ್ಷಣ ತೊಳೆದು ತೆಗೆದುಕೊಳ್ಳಬೇಕೆಂದು, ಇಲ್ಲದಿದ್ದರೆ ಏನೋ ಕೆಟ್ಟದ್ದು ನಡೆಯುತ್ತದೆಂಬ ಭಾವನೆ ಹಿರಿಯರಿಂದ ತಿಳಿದಿದ್ದೇವೆ. ಮೊದಲೇ ಶರೀರದಲ್ಲಿನ ಗುಣಗಳಿಂದ ಕುಲ ಎನ್ನುವ ವ್ಯತ್ಯಾಸ ಕಾಣಿಸುವುದು, ನಾವು ದೊಡ್ಡವರು, ನಮಗಿಂತ ಅವರು ಚಿಕ್ಕವರು ಎಂದುಕೊಳ್ಳುತ್ತಿದ್ದೆವು.

ನಾವು ಯಾವಾಗಲಾದರೂ ಸಾಮಾಗ್ರಿಗಳಿಗಾಗಿ ಬಜಾರಿಗೆ ಹಿರಿಯರ ಹಿಂದೆಹೋದರೆ ನಾವು ಕುಡಿಯುವುದಕ್ಕೆ ನೀರು ಕೇಳುತ್ತಿದ್ದೆವು. ಆಗ ಅಂಗಡಿಯಲ್ಲಿ ಮಾರುವ ಶೆಟ್ಟಿಯವರು ನೀರನ್ನು ಗ್ಲಾಸಿನಲ್ಲಿ ಕೊಟ್ಟರೂ, ಗ್ಲಾಸಿನ ಮೇಲೆ ನೀರು ಚೆಲ್ಲಿ ತೆಗೆದುಕೊಳ್ಳುತ್ತಿದ್ದರು. ಹಾಗೆ ಏಕೆ ಮಾಡುತ್ತಿದ್ದಾರೆಂದು ಕೇಳಿದಾಗ, ನಾವು ಕಡಿಮೆ ಕುಲದವರು, ಅವರು ನಮಗಿಂತ ದೊಡ್ಡ ಕುಲದವರು. ನಾವು ಗ್ಲಾಸನ್ನು ತಾಕಿದಾಗ ಅದನ್ನು ಹಾಗೆಯೇ ತೆಗೆದುಕೊಂಡರೆ ಅಂಟು ಬರುತ್ತದೆಂದು, ಅದರಿಂದ ಕೆಡಕು ನಡೆಯುತ್ತದೆಂದು, ಆದ್ದರಿಂದ ತೊಳೆದು ತೆಗೆದುಕೊಂಡರೆ ಆ ದೋಷ ಹೋಗುತ್ತದೆಂದು ಹೇಳುತ್ತಿದ್ದರು. ಆಗ ಸ್ವಲ್ಪ ಅರ್ಥವಾಗಿದೆ. ನಮಗಿಂತ ಕಡಿಮೆ ಕುಲದವರಿದ್ದಾರೆ. ಹಾಗೇ ನಮಗಿಂತ ಹೆಚ್ಚಿನ ಕುಲದವರಿದ್ದಾರೆಂದು, ಮತ ವಿಷಯ ತಿಳಿಯದ ಮುನ್ನವೇ ಕುಲ ವಿಷಯ ತಿಳಿದುಹೋಗಿದೆ. ಆಗ ಸ್ವಲ್ಪ ಸ್ವಲ್ಪವಾಗಿ ಕುಲಗಳನ್ನು ಕುರಿತು ತಿಳಿಯತೊಡಗಿತು.

ಸುಮಾರು ಹತ್ತು ವರ್ಷಗಳ ವಯಸ್ಸು ಬರುವಷ್ಟರಲ್ಲಿ ಕುಲಗಳಲ್ಲಿ ದೊಡ್ಡ ಚಿಕ್ಕ ಕುಲಗಳು ಇವೆಯೆಂದು ತಿಳಿದಿದೆ. ಮನುಷ್ಯರಲ್ಲಿ ಕುಲಗಳು ಮಾತ್ರವೇ ತಿಳಿದ ನಮಗೆ ಮತಗಳ ಬಗ್ಗೆ ತಿಳಿದಿಲ್ಲ. ಮನುಷ್ಯರೆಲ್ಲರಲ್ಲಿಯೂ ಕುಲಗಳೇ ಇವೆಯೆಂದು ಅಂದುಕೊಳ್ಳುತ್ತಿದ್ದೆವು. ಅಲ್ಲಲ್ಲಿ ಮುಸ್ಲಿಮ್‌ರು ಕಾಣಿಸಿದರೂ ಎಲ್ಲರಂತೆ ಅವರದ್ದು ಒಂದು ಕುಲ ಎಂದು ಅಂದುಕೊಂಡಿದ್ದೆವು. ನನಗೆ ಹದಿನಾಲ್ಕು ವರ್ಷಗಳು ಬರುವವರೆಗು ಮತಗಳ ಬಗ್ಗೆ ಗೊತ್ತಿಲ್ಲ. ಮುಸ್ಲಿಮ್‌ರು, ಕ್ರೈಸ್ಥರು ಕಾಣಿಸಿದರೂ ಅವರದ್ದು ಕೂಡಾ ಕುಲವೇ

ಎಂದುಕೊಂಡಿದ್ದೆವು. ಪೀರ್ಲ ಹಬ್ಬವನ್ನು ನೋಡುತ್ತಿದ್ದೆವು. ಅವರು ಸಕ್ಕರೆಯನ್ನು ಪೀರ್ಲುಗೆ ಓದಿಸುತ್ತಿರುವಾಗ, ದೇವತಾರಾಧನೆಯಲ್ಲಿ ಅದು ಕೂಡಾ ಒಂದು ಆರಾಧನೆ ಎಂದುಕೊಂಡಿದ್ದೇವೆ. ಪೀರ್ಲಹಬ್ಬದಲ್ಲಿ ಹಿಂದೂಗಳೇ ಸಕ್ಕರೆಕೊಟ್ಟು ಪೀರ್ಲಗೆ ಹರಕೆಯನ್ನು ಈಡೇರಿಸಿಕೊಳ್ಳುತ್ತಿದ್ದರು. ಪೀರ್ಲು ಕೂಡಾ ದೇವತೆಗಳಲ್ಲಿ ಒಂದು ವಿಧವಾದ ದೇವತೆಗಳೆಂದು ಅಂದುಕೊಂಡಿದ್ದೆವು. ನಂತರ ನಮ್ಮ ವಯಸ್ಸು ಸುಮಾರು 18 ರಿಂದ 20 ವರ್ಷಗಳ ವಯಸ್ಸಿನಲ್ಲಿ ಓದುವ ಓದಿನಲ್ಲಿ ಮತ ಪ್ರಸ್ತಾವನೆ ಬರುತ್ತಿತ್ತು. ಹಾಗೆ ವಯಸ್ಸು ಬಂದಂತೆಲ್ಲ 'ಮತ' ಎನ್ನುವುದು ಒಂದಿದೆಯೆಂದು ತಿಳಿದಿದೆ. ಮುಸ್ಲಿಮ್‌ರು ದೇವತೆಗಳನ್ನು ಆರಾಧಿಸುವುದಿಲ್ಲ, ಅವರು ನಮಾಜ್ ಮಾಡುತ್ತಾರೆ. ಹಿಂದೂಗಳು ದೇವತಾರಾಧನೆ ಮಾಡುತ್ತಾರೆ ಎಂದು ಯುಕ್ತ ವಯಸ್ಸು ಬರುವಷ್ಟರಲ್ಲಿ ತಿಳಿದುಹೋಗಿದೆ. ಬಾಲ್ಯದಲ್ಲಿ ಕುಲಗಳು ತಿಳಿದಾಗ, ಯೌವ್ವನದಲ್ಲಿ ಮತಗಳು ತಿಳಿದಿವೆ.

ಈ ದಿನ ಕೂಡಾ ಹಿಂದೂಗಳಲ್ಲಿ ಯುಕ್ತ ವಯಸ್ಸು ಬರುವವರೆಗು ಮತಗಳ ವಿಷಯ ತಿಳಿಯದಂತೆ ಹೋಗಿದೆ. ಆದರೇ ಮುಸ್ಲಿಮ್ ಮತದಲ್ಲಾಗಲಿ, ಕ್ರೈಸ್ಥವ ಮತದಲ್ಲಾಗಲಿ 8 ವರ್ಷಗಳ ವಯಸ್ಸಿಗೇ ನಮ್ಮದು ಇಂತಹ ಮತವೆಂದು ಅವರಿಗೆ ತಿಳಿದುಹೋಗುತ್ತಿದೆ. ಮುಸ್ಲಿಮ್‌ರು, ಕ್ರೈಸ್ಥರು ಚಿಕ್ಕ ವಯಸ್ಸಿನಲ್ಲಿಯೇ ಅವರ ಪ್ರಾರ್ಥನಾ ಮಂದಿರಗಳಿಗೆ ಅವರ ಹಿರಿಯರ ಹಿಂದೆ ಹೋಗುವುದರಿಂದ, ಅವರ ಬೋಧಕರು ಹೇಳುವ ಬೋಧನೆಗಳಿಂದ, ಮತವೆನ್ನುವುದು ಅವರಿಗೆ ಚಿಕ್ಕ ವಯಸ್ಸಿನಲ್ಲಿಯೇ 8 ವರ್ಷಗಳಿಗೆ ತಿಳಿದುಹೋಗುತ್ತಿದೆ. ಹಿಂದೂಮತದಲ್ಲಿನ ಮಕ್ಕಳಿಗೆ ದೇವರು ಎಂದಾಗಲಿ, ಹಿರಿಯರ ಹಿಂದೆ ದೇವಾಲಯಗಳಿಗೆ ಹೋಗುವುದಾಗಲಿ, ಅಲ್ಲಿ ಮಾಡುವ ಪೂಜೆಗಳಾಗಲಿ ತಿಳಿಯದಿರುವುದರಿಂದ ಹಿಂದೂಗಳಿಗೆ ಮತವೆನ್ನುವುದು ಪ್ರತ್ಯೇಕವಾಗಿ ಇದೆಯೆಂದು ಬಹಳಜನರಿಗೆ ತಿಳಿದಿಲ್ಲ. ಹಿಂದೂಗಳ ಮಕ್ಕಳಿಗೆ ಕುಲಗಳ ವಿಷಯ ತಿಳಿಯಬಹುದೇನೊ ಆದರೇ, ಮತಗಳ ವಿಷಯ ತಿಳಿದಿಲ್ಲವೆಂದೇ ಹೇಳಬಹುದು. ಒಂದು ಮತವಿಷಯವೇ ಅಲ್ಲದೆ ದೇವರಾಗಲಿ, ದೇವರ ಭಕ್ತಿಯಾಗಲಿ ಏನೂ ತಿಳಿದಿಲ್ಲ.

ಇದು ಐವತ್ತು, ಅರವತ್ತು ವರ್ಷಗಳ ಕೆಳಗೆ ನಮಗೆ ನಡೆದ ವಿಷಯವನ್ನು ನಾವು ಹೇಳಿದ್ದೇವೆ. ಆದರೇ ಅಂದಿಗೂ ಇಂದಿಗೂ ಸ್ವಲ್ಪ ವ್ಯತ್ಯಾಸ ಸಮಾಜದಲ್ಲಿ ಕಾಣಿಸುತ್ತಾ ಇದೆ. ಹಿಂದೂಗಳಲ್ಲಿ ಕುಲಗಳ ವಿಷಯ ಕೂಡಾ ಯುಕ್ತ ವಯಸ್ಸಿನವರೆಗು ತಿಳಿಯದೇ ಹೋಗಿದೆ. ಯುಕ್ತವಯಸ್ಸಿನಲ್ಲಿಯೇ ಕುಲಗಳ ವಿಷಯ ತಿಳಿಯುತ್ತಿದೆ, ಮುಸ್ಲಿಮ್, ಕ್ರೈಸ್ಥವರಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಏಳು, ಎಂಟು ವರ್ಷಗಳಿಗೇ ಅವರಲ್ಲಿ ಮತ ಎನ್ನುವುದು ಘಾಡವಾಗಿ ನಾಟಿಕೊಳ್ಳುತ್ತಿದೆ. ಅವರನ್ನು ನೋಡಿದ ಹಿಂದೂಗಳು ಕೂಡಾ ಮತ ಎನ್ನುವ ಹಾಡು ಹಾಡುತ್ತಿದ್ದಾರೆ. ನಮ್ಮದು ಹಿಂದೂಮತ ಎಂದು ಹೇಳುತ್ತಿದ್ದಾರೆ. ಹಾಗೆ ಎಲ್ಲರೂ ಮತಗಳನ್ನು ತಿಳಿದುಕೊಂಡರೂ, ಕುಲ ಎನ್ನುವುದು ಪೂರ್ವದಲ್ಲಿ ತಿಳಿದಷ್ಟು ವೇಗವಾಗಿ ತಿಳಿಯುತ್ತಿಲ್ಲ. ಮುಂದೆ ತಿಳಿದರೂ, ಹಿಂದೆ ತಿಳಿದರೂ, ಈ ದಿನ ಕೆಲವು ಕುಲಗಳು ಒಂದರಲ್ಲಿ ಒಂದು ಬೆರೆತು ಹೋದರೂ, ಕೆಲವು ಮಾತ್ರ ಪೂರ್ತಿ ವಿಭೇದವಾಗಿವೆ. ಪೂರ್ವದಲ್ಲಿದ್ದಷ್ಟು ಕುಲಗಳ ಸಂಖ್ಯೆ ಇಲ್ಲದೆ ಸ್ವಲ್ಪ ಕಡಿಮೆಯಾದರೂ, ನೂರು ಕುಲಗಳಲ್ಲಿ ನಾಲ್ಕು ಅಥವಾ ಐದು ಕುಲಗಳು ಇಲ್ಲದಂತೆ ಹೋದರೂ, ಇತರೆ ಕುಲಗಳಲ್ಲಿ ಬೆರೆತು ಹೋದರೂ, ಉಳಿದ ಕುಲಗಳೆಲ್ಲವೂ ಹಾಗೆಯೇ ಇವೆ.

ಪ್ರಪಂಚದಲ್ಲಿ ಈ ದಿನ ಇರುವ ಹನ್ನೆರಡು ಮತಗಳಲ್ಲಿ ಇಲ್ಲದ ಕುಲ ವಿವಕ್ಷಗಳು ಒಂದು ಹಿಂದೂಮತದಲ್ಲಿಯೇ ಇವೆ. ಕುಲ ಎನ್ನುವುದು ಮನುಷ್ಯನ ಅಜ್ಞಾನದಿಂದ ಹುಟ್ಟಿದೆಯೆಂದು ತಿಳಿಯುತ್ತಿದೆ. ಯಾವ ಕುಲದವರು ಆ ಕುಲದಲ್ಲಿಯೇ ವಿವಾಹವನ್ನು ಮಾಡಿಕೊಳ್ಳುವುದು ನಡೆಯುತ್ತಿದೆ. ಹಾಗೆ ವಿವಾಹಗಳ ಕಟ್ಟುಪಾಡುಗಳು ಅಲ್ಲಲ್ಲಿ ಇಲ್ಲದಂತೆ ಹೋಗಿ, ಕುಲಾಂತರ ವಿವಾಹಗಳು ಕೆಲವುಕಡೆ ನಡೆಯುತ್ತಿವೆ. ಕುಲಗಳು ಅಜ್ಞಾನದಿಂದ ಏರ್ಪಟ್ಟಿವೆಯೆಂದು ಜ್ಞಾನವನ್ನು ತಿಳಿದ ದಿನ ತಿಳಿಯುತ್ತದೆ. ಆದರೆ ಈ ದಿನ ಯಾರೂ ಜ್ಞಾನವನ್ನು ತಿಳಿಯುತ್ತಿಲ್ಲ. ಕುಲಾಂತರ ವಿವಾಹಗಳು ಎಲ್ಲಿ ನಡೆದರೂ ಅವು ಅಪರೂಪವಾಗಿ ನಡೆಯುತ್ತಿವೆ. ಮನುಷ್ಯರಲ್ಲಿ ಮತಭೇದಗಳು,

ಕುಲಭೇದಗಳು ಇಲ್ಲದಂತೆ ಮಾಡಬೇಕೆಂದು ನಾವು ಎಷ್ಟೋ ಸಲ ನಮ್ಮ ಉಪನ್ಯಾಸಗಳಲ್ಲಿ ಹೇಳಿದ್ದೇವೆ. ಮೊದಲೇ ಆ ಕೆಲಸವನ್ನು ಮಾಡಿದರೆ ಚೆನ್ನಾಗಿರುತ್ತದೆಂದು ನಾನು ಕುಲಾಂತರ ವಿವಾಹ ಮಾಡಿಕೊಂಡಿದ್ದೇನೆ. ನಂತರ ನನ್ನ ಕುಮಾರನಿಗೆ ಕೂಡಾ ಕುಲಾಂತರ ವಿವಾಹವನ್ನು ಮಾಡಿದ್ದೇವೆ. ಅಷ್ಟೇ ಅಲ್ಲದೆ ನನ್ನ ಸಮಕ್ಷಮದಲ್ಲಿ ನಮ್ಮ ಆಶ್ರಮದಲ್ಲಿ ನಡೆದಿರುವವು ಇಲ್ಲಿಗೆ ಸುಮಾರು 150 ರವರೆಗು ಇರಬಹುದು. ಅದರಲ್ಲಿ ಮೂರು ಅಥವಾ ನಾಲ್ಕು ಹೊರತು ಉಳಿದಿರುವವೆಲ್ಲ ಕುಲಾಂತರ ವಿವಾಹಗಳಾಗಿಯೇ ಮಾಡಿದ್ದೇವೆ. ಎರಡು ಕಡೆ ದೊಡ್ಡವರನ್ನು ಒಪ್ಪಿಸಿಯೇ ಮಾಡಿದ್ದೇವೆ ಹೊರತು ಕಳ್ಳತನದ ಮದುವೆಗಳು ಅಲ್ಲ.

ಪ್ರಪಂಚದಲ್ಲಿರುವ ಹನ್ನೆರಡು ಮತಗಳಲ್ಲಿ ಮುಖ್ಯವಾದವು, ದೊಡ್ಡವು ಆಗಿರುವವು ಮೂರು ಮತಗಳೇ ಇವೆ. ಅವುಗಳೇ ಹಿಂದೂ, ಇಸ್ಲಾಮ್, ಕ್ರೈಸ್ಥವ ಮತಗಳು, ಮೊದಲಿನಿಂದ ಇರುವುದು ಹಿಂದೂಮತವೆಂದು ಹೇಳಬಹುದು. ನಂತರ ಕಲಿಯುಗದಲ್ಲಿ ಇಸ್ಲಾಮ್, ಕ್ರೈಸ್ಥವ ಬಂದಿವೆ. ಆ ಎರಡು ಮತಗಳು ಒಂದು ಇಂಜೀಲು, ಎರಡು ಖುರ್‌ಆನ್ ಎನ್ನುವ ಗ್ರಂಥಗಳ ಆಧಾರದಿಂದ ತಯಾರಾಗಿವೆಯೆಂದು ಹೇಳಿದರೂ, ವಾಸ್ತವಕ್ಕೆ ಆ ಗ್ರಂಥಗಳಲ್ಲಿ ಮತ ಎನ್ನುವ ಪ್ರಸ್ತಾಪ ಇಲ್ಲ. ಆದರೂ ಮಾಯೆ ಪ್ರಭಾವದಿಂದ ಮತಗಳು ತಯಾರಾಗಿವೆ. ಹಿಂದೂಗಳು ಕೃತಯುಗದಿಂದ ಇದ್ದಾರೆ. ಸುಮಾರು 24 ಲಕ್ಷಗಳ ವರ್ಷಗಳಿಂದ ಇರುವ ಹಿಂದೂಗಳಲ್ಲಿ ಮತ ಎನ್ನುವ ಪ್ರಸ್ತಾಪ ಇಲ್ಲದಂತೆ ಬದುಕಿದ್ದಾರೆ. ಆದರೇ ಕಲಿಯುಗದಲ್ಲಿ ಮೂರು ಸಾವಿರ ವರ್ಷಗಳು ಕಳೆದ ನಂತರ ಹಿಂದೂಗಳಲ್ಲಿ ಮತ ಎನ್ನುವುದು ಬಂದಿದೆ. ಕಲಿಯುಗದಲ್ಲಿ ಇತರೆ ಮತಗಳು ಬಂದ ನಂತರ ಮತ ಎನ್ನುವ ಹೆಸರು ಹಿಂದೂಗಳಿಗೆ ಬಂದಿದೆ. ವಾಸ್ತವವಾಗಿ ಈ ದಿನ ಹಿಂದೂಮತ ಎಂದು ಕರೆಯಲ್ಪಡುವ ಹೆಸರು 150 ವರ್ಷಗಳ ಪೂರ್ವದವರೆಗು ಇಂದೂಮತ ಎನ್ನುವ ಹೆಸರಿನಿಂದ ಇರುತ್ತಿತ್ತು.

ಈಗ ಸುಮಾರು 150 ವರ್ಷಗಳಿಂದ ಇಂದೂಮತ ಸ್ವಲ್ಪ ಹಿಂದೂಮತವಾಗಿ ಬದಲಾಗಿಹೋಗಿದೆ.

ಕ್ರೈಸ್ಥವ ಮತಕ್ಕೆ ಇಂಜೀಲು (ಬೈಬಲ್) ಗ್ರಂಥ ಆಧಾರವಾಗಿರುವಂತೆ, ಬೈಬಲ್ ಕ್ರೈಸ್ಥವ ಮತ ಗ್ರಂಥವೆನ್ನುವಂತೆ ಅವರು ಹೇಳುತ್ತಿದ್ದಾರೆ. 1400 ವರ್ಷಗಳ ಕೆಳಗೆ ತಯಾರಾದ ಇಸ್ಲಾಮ್ ಮತಕ್ಕೆ ಖುರ್‌ಆನ್ ಗ್ರಂಥ ಆಧಾರ ಎಂದು ಹೇಳುತ್ತಿದ್ದಾರೆ. ಖುರ್‌ಆನ್ ಮುಸ್ಲಿಮ್‌ರ ಮತ ಗ್ರಂಥವೆಂದು ಕೂಡಾ ಹೇಳಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಆ ಎರಡೂ ದೈವ ಗ್ರಂಥಗಳು. ಅದರಲ್ಲಿ ಮತ ಪ್ರಸ್ತಾಪ ಇಲ್ಲ. ಆ ಎರಡು ಗ್ರಂಥಗಳು ಸರ್ವ ಮಾನವರಿಗು ಹಿತೋಪದೇಶ ವನ್ನು ಮಾಡುತ್ತಿವೆ ಹೊರತು ಮತೋಪದೇಶವನ್ನು ಮಾಡಲಿಲ್ಲ. ಈ ಎರಡು ಗ್ರಂಥಗಳಿಗಿಂತ ಮೊದಲು, ಐದು ಸಾವಿರ ವರ್ಷಗಳ ಪೂರ್ವದಲ್ಲಿಯೇ ಭಗವದ್ಗೀತೆ ಹುಟ್ಟಿದೆ. ಅದರಲ್ಲಿ ಕೂಡಾ ಮತ ಪ್ರಸ್ತಾಪ ಇಲ್ಲ. ಆದರೂ ಮೂರು ದೈವ ಗ್ರಂಥಗಳಿಗು ಮೂರು ಮತಗಳನ್ನು ಮನುಷ್ಯರೇ ಸೃಷ್ಟಿಸಿದ್ದಾರೆ. ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ದೈವ ಜ್ಞಾನವೇ ಇದ್ದರೂ, ಅವುಗಳಲ್ಲಿ ಮತವನ್ನು ಸೇರಿಸಿಕೊಂಡು ಸ್ವಲ್ಪಮಟ್ಟಿಗೆ ತೋರಿಸುವುದು ನಡೆದಿದೆ. ಭಗವದ್ಗೀತೆ ವಿಷಯಕ್ಕೆ ಬಂದರೆ ಭಗವದ್ಗೀತೆ ಗ್ರಂಥದಲ್ಲಿ ಸ್ವಚ್ಛವಾದ ಜ್ಞಾನವಿರುವಾಗ ಕೆಲವರು ಸ್ವಾರ್ಥವರರು ಅದರಲ್ಲಿ ಕೂಡಾ ತಮ್ಮ ಪೈತ್ಯವನ್ನು ಏರಿಸಿದ್ದಾರೆ. ಹಾಗೆ ಮಾಡುವುದಲ್ಲದೆ ಮೊದಲ ಕೃತಯುಗದಿಂದ ಇರುವ ಕುಲಕ್ಕೆ ಬಲ ಕೈಗೂಡಿಸುವುದಕ್ಕೆ ಗೀತೆಯಲ್ಲಿನ ವಾಸ್ತವ ಶ್ಲೋಕಗಳಿಗೆ ಅವಾಸ್ತವ ಭಾವನೆಗಳನ್ನು ಕಲ್ಪಿಸಿ ಹೇಳಿ ಕುಲಕ್ಕೆ ಬಲವನ್ನು ಕೈಗೂಡಿಸಿದ್ದಾರೆ.

ಕ್ರೈಸ್ಥವರು, ಮುಸ್ಲಿಮ್‌ರು ಮತಕ್ಕೆ ಬಲವನ್ನು ಕೈಗೂಡಿಸಿಕೊಳ್ಳುವಂತೆ ಅವರ ಗ್ರಂಥಗಳನ್ನು, ಅವುಗಳಲ್ಲಿನ ಭಾವನೆಗಳನ್ನು ಬದಲಾಯಿಸಿ ಬರೆದು ಕೊಂಡಾಗ, ಹಿಂದೂಗಳು ಭಗವದ್ಗೀತೆಯಲ್ಲಿ ಮತಕ್ಕಿಂತ ಮೊದಲು ಕುಲಕ್ಕೆ ಬಲ ಕೈಗೂಡಿಸಿಕೊಳ್ಳುವಂತೆ ಶ್ಲೋಕಗಳ ಭಾವನೆಯನ್ನು ಬರೆದು ಕೊಂಡಿದ್ದಾರೆ.

ಹಿಂದೂಗಳನ್ನು ಭಗವದ್ಗೀತೆಯನ್ನು ಅನುಸರಿಸಿ ನಾಲ್ಕು ಭಾಗಗಳು ಮಾಡಿದ್ದಾರೆ. ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿರುವ 13ನೇ ಶ್ಲೋಕವನ್ನು ನೋಡಿರಿ.

**ಶ್ಲೋ॥ 13. ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ।**
**ತಸ್ಯಕರ್ತಾರ ಮಪಿ ಮಾಂ ವಿದ್ಧ್ಯಕರ್ತಾರ ಮವ್ಯಯಮ್ ॥**

**ಭಾವಾರ್ಥ :– "ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ. ಕರ್ಮಗಳ ಗುಣಗಳ ವಿಭಾಗದಿಂದ ನಾಲ್ಕು ಕುಲಗಳು ಏರ್ಪಟ್ಟಿವೆ."** ಎಂದು ಹೇಳಿದಂತೆ ಇದೆ.

ಭಗವದ್ಗೀತೆಯಲ್ಲಿ ಈ ಶ್ಲೋಕ ದೊಡ್ಡ ಜ್ಞಾನವನ್ನು ತಿಳಿಸುತ್ತಿರುವಾಗ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರೆನ್ನುವ ನಾಲ್ಕು ಕುಲಗಳನ್ನು ವರ್ಣಿಸಿ ಹೇಳುವುದಾಗಿದೆ. ಕೃತಯುಗದಿಂದ ಕಲಿಯುಗದವರೆಗು ಕುಲಗಳು ಮಾತ್ರವೇ ಇರುವಾಗ, ಕಲಿಯುಗದಲ್ಲಿ ಭಗವದ್ಗೀತೆಯಲ್ಲಿ ಎಲ್ಲಾ ಕುಲಗಳನ್ನು ಸೇರಿಸಿ, ಒಟ್ಟಾರೆ ಹಿಂದೂ ಸಮಾಜವನ್ನು ನಾಲ್ಕು ಭಾಗಗಳಾಗಿ ವಿಭಜಿಸುವುದು ನಡೆದಿದೆ. ಆಗಾಗಲೇ ಬ್ರಾಹ್ಮಣ ಕುಲ ಒಂದಾಗಿದ್ದು, ವೈಶ್ಯರ ಕುಲ ಕೂಡಾ ಒಂದು ಇದೆ. ಕ್ಷತ್ರಿಯರ ಕುಲ ಕೂಡಾ ಒಂದು ಇದೆ. ಒಟ್ಟಾರೆ ಹಿಂದೂ ಸಮಾಜದಲ್ಲಿ ಮೂರು ಕುಲಗಳು ಶೇಕಡ ಐದು ಅಥವಾ ಹತ್ತರಷ್ಟು ಪ್ರಜೆಗಳಿರುವಾಗ ಉಳಿದ ಕುಲಗಳೆಲ್ಲವೂ ಸುಮಾರು ಶೇ. 90 ಅಥವಾ 95 ರಷ್ಟು ಇವೆ. ಶೇ.90 ರಷ್ಟು ಇರುವ ಕುಲಗಳೆಲ್ಲವೂ ನೀಚವಾದವೆನ್ನುವ ಭಾವನೆ ಬರುವಂತೆ ಶೂದ್ರರು ಎಂದು ಕರೆದಿದ್ದಾರೆ. ಎಷ್ಟೋ ಕುಲಗಳೆಲ್ಲ ಸೇರಿಸಿ ಶೇ. 90 ರಷ್ಟು ಪ್ರಜೆಗಳನ್ನು ಶೂದ್ರರು ಎನ್ನುವ ಹೆಸರಿನಿಂದ ಬೇರ್ಪಡಿಸುವುದೆ ಅಲ್ಲದೆ, ಶೂದ್ರರಾದವರು ಬ್ರಾಹ್ಮಣ, ವೈಶ್ಯ, ಕ್ಷತ್ರಿಯರಿಗೆ ಸೇವೆ ಮಾಡುವ ನಿಮಿತ್ತ ಇದ್ದಾರೆಂದು ಹೇಳುತ್ತಿದ್ದಾರೆ. ಕೆಲವುಕಡೆ ವೈಶ್ಯ, ಕ್ಷತ್ರಿಯರು ಕೂಡಾ ಬ್ರಾಹ್ಮಣರ ಸೇವೆ ಸಲುವಾಗಿಯೇ ಎಂದು ಹೇಳಿದ್ದಾರೆ. ದೈವಗ್ರಂಥವಾದ ಭಗವದ್ಗೀತೆಯಲ್ಲಿಯೇ ಕುಲಗಳ ವ್ಯತ್ಯಾಸವನ್ನು, ಕುಲಗಳ ಗುಂಪುಗಳನ್ನು ತಯಾರು ಮಾಡಿ ತೋರಿಸುವುದಾಗಿದೆ. ವಾಸ್ತವವಾಗಿ ಭಗವದ್ಗೀತೆಯಲ್ಲಿ ಕುಲಗಳ ಪ್ರಸ್ಥಾವನೆಯೇ ಇಲ್ಲ. ಆದರೂ

ಭಗವದ್ಗೀತೆಯನ್ನು ಹೇಳುವ ಪಂಡಿತರು ಬ್ರಾಹ್ಮಣರೇ ಆಗಿರುವುದರಿಂದ ಅವರು ತಮ್ಮ ಇಷ್ಟಾನುಸಾರ ಶ್ಲೋಕ ಒಂದರ ಭಾವನೆಯನ್ನು ಬರೆದು ಹೇಳುವುದಾಗಿದೆ. ವಾಸ್ತವವೇನೆಂದು ನೋಡಿದ ನಮಗೆ ಆ ಶ್ಲೋಕದಲ್ಲಿ ಶರೀರ ಅಂತರ್ಗತ ಜ್ಞಾನವನ್ನು ಹೇಳಿರುವಾಗ, ಅದನ್ನು ಹೇಳದೆ ಅದರಲ್ಲಿ ಕುಲಗಳ ಪ್ರಸ್ತಾಪವನ್ನು ತಂದು ಹೇಳಿದ್ದಾರೆ. ಈಗ ಮೇಲಿನ ಶ್ಲೋಕದಲ್ಲಿನ ನಿಜ ಭಾವನೆಯನ್ನು ವಿವರಿಸಿಕೊಳ್ಳೋಣ.

ಭಗವಂತನು ನಾಲ್ಕು ವರ್ಣಗಳನ್ನು ಸೃಷ್ಟಿಸಿದ್ದಾನೆ ಅದು ವಾಸ್ತವ. ಅವು ಯಾವುವು? ಎನ್ನುವುದೇ ಇಲ್ಲಿ ದೊಡ್ಡವರ ಸಮಸ್ಯೆ. ಇಲ್ಲಿಯವರೆಗು ಆ ನಾಲ್ಕು ವರ್ಣಗಳನ್ನು ಕುರಿತು ಬಹಳಜನ ನಾಲ್ಕು ಕುಲಗಳಾಗಿ ವರ್ಣಿಸಿಕೊಳ್ಳುವುದು ನಡೆದಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಾಗಿ ನಾಲ್ಕು ವರ್ಣಗಳು ಸೃಷ್ಟಿಸಲ್ಪಟ್ಟಿವೆಯೆಂದು ಪ್ರಚಾರವಾಗಿದೆ. ಅದು ನಿಜವಾ! ಎಂದು ನೋಡಿದರೆ, ಸಮಸ್ತ ಪ್ರಪಂಚವನ್ನು ಸೃಷ್ಟಿಸಿದ ಪರಮಾತ್ಮ ಪ್ರಪಂಚದಲ್ಲಿರುವ ಮನುಷ್ಯರನ್ನು ಕೂಡಾ ಪ್ರಕೃತಿಯಿಂದ ತಯಾರು ಮಾಡಿದ್ದಾನೆ. ಆದರೆ ಪ್ರಪಂಚ ಜನಸಂಖ್ಯೆಯಲ್ಲಿ ಈ ನಾಲ್ಕು ಕುಲಗಳು ಎಲ್ಲಿಯೂ ಕಾಣಿಸುವುದಿಲ್ಲ. ಇದರಿಂದ ನಮಗೆ ಸಂಶಯವೇರ್ಪಡುತ್ತಿದೆ. ಭಗವಂತನು ಹೇಳಿದ ಪ್ರತಿ ಮಾತು ಸರ್ವಜೀವರಾಶಿಗಳಿಗೆ ಅನ್ವಯಿಸುವುದಾಗಿ ಇರುವಾಗ, ಈ ನಾಲ್ಕು ವರ್ಣಗಳು ನಾಲ್ಕು ಕುಲಗಳೆನ್ನುವ ಮಾತು, ವಿದೇಶಗಳಲ್ಲಿಯೇ ಅಲ್ಲ ಇಂಡಿಯಾದಲ್ಲಿ ಕೂಡಾ ಅನ್ವಯಿಸುವುದಿಲ್ಲ. ಪರಮಾತ್ಮ ಬಾಹ್ಯವಾಗಿರುವ ಯಾವ ಮತವನ್ನಾಗಲಿ, ಯಾವ ಕುಲವನ್ನಾಗಲಿ ಇಲ್ಲಿಯವರೆಗು ಏರ್ಪಡಿಸಲಿಲ್ಲ. ಕುಲಗಳು, ಮತಗಳು ಭೂಮಿಮೇಲೆ ಏರ್ಪಡಿಸಿಕೊಂಡವರು ಮನುಷ್ಯರೇ. ಕುಲ, ಮತ ಭೇದಗಳು ಮನುಷ್ಯರು ಏರ್ಪಡಿಸಿಕೊಂಡಿರುವವೇ ಹೊರತು ಪರಮಾತ್ಮ ಸೃಷ್ಟಿಸಲಿಲ್ಲ. ಇನ್ನೂ ಕೆಲವರು "ಭಗವಂತನು ಗುಣಕರ್ಮ ವಿಭಾಗ ಎಂದಿದ್ದಾನೆ ಅಲ್ಲವೆ! ಮನುಷ್ಯರು ಮಾಡುವ ಕೆಲಸಗಳನ್ನನುಸರಿಸಿ, ಗುಣಗಳನ್ನು ಅನುಸರಿಸಿ ಅವರನ್ನು ವಿಭಜಿಸಿಕೊಳ್ಳಬಹುದು. ವ್ಯಾಪಾರ ಮಾಡುವವರು ಯಾರಾದರೂ ವೈಶ್ಯರೆಂದು,

ನೀಚ ಕೆಲಸಗಳು ಮಾಡುವವರು ಶೂದ್ರರೆಂದು, ರಾಜ್ಯವನ್ನಾಳುವವರನ್ನು ಕ್ಷತ್ರಿಯರೆಂದು ಹೇಳಿಕೊಳ್ಳಬಹುದು. ಅವರ ಜನ್ಮತಃ ಬಂದಿರುವ ಕುಲ ಮುಖ್ಯವಲ್ಲ. ಅವರು ಮಾಡುವ ಕೆಲಸಗಳನ್ನು ಅನುಸರಿಸಿ ಕುಲವನ್ನೇರ್ಪಡಿಸಬೇಕು. ಹುಟ್ಟಿನಿಂದ ಬ್ರಾಹ್ಮಣನಾದರೂ ನೀಚಕೆಲಸಗಳು ಮಾಡಿದರೆ ಶೂದ್ರನೆಂದು ಹೇಳಬೇಕು" ಎಂದು ಹೇಳುತ್ತಿದ್ದಾರೆ. ಆತನು ಮಾಡಿರುವುದಾಗಲಿ, ಹೇಳಿರುವುದಾಗಲಿ ಪ್ರತಿ ಜೀವರಾಶಿಗು ಅನ್ವಯಿಸುವುದಾಗಿ ಇರುವಾಗ, ಮನುಷ್ಯರಲ್ಲಾದರೇ ನಾಲ್ಕು ಕುಲಗಳು ಏರ್ಪಡಿಸಿದಂತೆ ಹೇಳಿಕೊಳ್ಳಬಹುದು. ಉಳಿದ ಜೀವರಾಶಿಗಳೆಷ್ಟೋ ಇವೆ ಅಲ್ಲವೆ! ಅವುಗಳನ್ನು ಯಾವ ಕುಲಗಳಾಗಿ ಹೇಳಬಲ್ಲೆವು? ನಾಯಿಗಳನ್ನು, ನರಿಗಳನ್ನು, ಬೆಕ್ಕುಗಳನ್ನು, ಇಲಿಗಳನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಾಗಿ ವಿಭಜಿಸಿ ಹೇಳಬಲ್ಲಿರಾ? ಹಾಗೆ ಹೇಳುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಈ ನಾಲ್ಕು ವರ್ಣಗಳು ಪರಮಾತ್ಮ ಹೇಳಿರುವವು ಅಲ್ಲ. ಮಾನವರು ಸೃಷ್ಠಿಸಿಕೊಂಡಿರುವವೇ ಎಂದು ತಿಳಿಯಬೇಕು. ಮೇಲಿನ ಶ್ಲೋಕದಲ್ಲಿ ನಾಲ್ಕು ವರ್ಣಗಳು ನನ್ನಿಂದ ಸೃಷ್ಠಿಸಲ್ಪಟ್ಟಿವೆ ಎಂದಿದ್ದಾನೆ. ಆದರೆ ಅವು ಬ್ರಾಹ್ಮಣ, ಕ್ಷತ್ರಿಯ ಕುಲಗಳೆಂದು ಹೆಸರು ಇಡಲಿಲ್ಲ ಅಲ್ಲವೆ! ಈ ವಿಧವಾಗಿ ಯೋಚಿಸಿದರೆ ಇಲ್ಲಿಯವರೆಗು ಈ ಶ್ಲೋಕಕ್ಕೆ ಬರೆದುಕೊಂಡ ಭಾವನೆ ಸರಿಯಾದುದು ಅಲ್ಲವೆಂದು ತಿಳಿದುಹೋಗುತ್ತಿದೆ. ಇದು ಸರಿಯಾದ ಅರ್ಥ ಅಲ್ಲದಿರುವಾಗ ಯಾವುದು ಸರಿಯಾದುದೆನ್ನುವುದು ಎಲ್ಲರಿಗೂ ಬರುವ ಪ್ರಶ್ನೆಯೇ. ಅದಕ್ಕೆ ಉತ್ತರ ಕೆಳಗೆ ನೋಡೋಣ.

ಭಗವಂತನಾದ ಶ್ರೀಕೃಷ್ಣನು ತನ್ನ ತಲೆ ಮೇಲೆ ನವಿಲು ಗರಿಯನ್ನು ಧರಿಸಿದ್ದಾನೆ. ಯಾರೂ ಧರಿಸದ ನವಿಲು ಗರಿಯನ್ನು ಆತನು ಧರಿಸುವುದರಲ್ಲಿ ಪ್ರತ್ಯೇಕತೆ ಏನೆಂದು ಯಾರೂ ಇಲ್ಲಿಯವರೆಗು ಯೋಚಿಸಲಿಲ್ಲವೆಂದೇ ಹೇಳಬಹುದು. ಈಗ ನಾವು ಯೋಚಿಸೋಣ. ಶ್ರೀಕೃಷ್ಣನು ನವಿಲುಗರಿಯನ್ನು ಅಂದಕ್ಕೊ, ಅಲಂಕಾರಕ್ಕೊ ಧರಿಸಲಿಲ್ಲ. ತಾನಿರುವ ಸ್ಥಿತಿಯನ್ನು ಕುರಿತು ನವಿಲುಗರಿಯ ಮೂಲಕ ತಿಳಿಸುತ್ತಾ, ನೀವೂ ಸಹ ಈ ಮಾದಿರಿಯಲ್ಲೇ

ಇರಬೇಕೆಂದು ಬಹಿರ್ಗತ ಮಾಡುವ ಆಧ್ಯಾತ್ಮಿಕ ರಹಸ್ಯವೇ ನವಿಲುಗರಿ ಧರಿಸುವುದರಲ್ಲಿನ ವಿಶೇಷಾರ್ಥವೆಂದು ತಿಳಿಯಬೇಕು. ನವಿಲುಗರಿ ದೊಡ್ಡ ಆಧ್ಯಾತ್ಮಿಕ ರಹಸ್ಯವನ್ನು ಕುರಿತು ಬೋಧಿಸುವ ವಿಶಿಷ್ಟತೆ ಹೊಂದಿದೆ. ಅದರ ವಿಶೇಷವೇನೆಂದರೆ! ನವಿಲುಗರಿಯ ಮಧ್ಯಭಾಗದಲ್ಲಿ ಕಪ್ಪು ಬೆರೆತಿರುವ ನೀಲಿ ಬಣ್ಣದಿಂದ ಕೂಡಿಕೊಂಡು ಸ್ವಲ್ಪ ದುಂಡಾಗಿ ಆಕರ್ಷಣೆಯಾಗಿ ಕಾಣಿಸುತ್ತಿರುತ್ತದೆ. ಈ ಭಾಗ ನವಿಲುಗರಿಯಲ್ಲಿ ಎಲ್ಲಾ ಬಣ್ಣಗಳಿಗಿಂತ ಮುಖ್ಯವಾಗಿ ತಿಳಿಯು ವಂತಿರುತ್ತದೆ. ಅದಕ್ಕೆ ಸುತ್ತಲೂ ಮಿಂಚುವಂತಹ ಎಲೆ ಹಸಿರುಬಣ್ಣ ಇರುತ್ತದೆ. ಅದರ ನಂತರ ಎಳೆಗೋಧಿಬಣ್ಣವಿರುವ ಆಕಾರ ಸುತ್ತಲೂ ಇರುತ್ತದೆ. ಈ ಎಳೆಗೋಧಿಬಣ್ಣದ ಸುತ್ತ ಕೊನೆಯಲ್ಲಿ ಮಿಂಚುತ್ತಿರುತ್ತದೆ. ಇದರ ಕೊನೆಯ ಅಂಚು ಮಿಂಚಿನ ನಂತರ ಸುತ್ತಲೂ ಗುರ್ತಿಸಲಾರದಷ್ಟು ತೆಳುವಾಗಿ ಒಂದು ಬಣ್ಣದ ಭಾಗವಿರುತ್ತದೆ. ಇವುಗಳಿಂದ ನವಿಲುಗರಿಯಲ್ಲಿ ಒಟ್ಟು ನಾಲ್ಕು ಭಾಗಗಳಿರುವಂತೆ ಗುರುತು ತಿಳಿಯುತ್ತಿದೆ. 1) ಮಧ್ಯದಲ್ಲಿ ಕಪ್ಪುಬಣ್ಣ ಬೆರೆತಿರುವ ನೀಲಿ ಬಣ್ಣವಿದೆ. 2) ದುಂಡನೆಯ ಮಿಂಚುತ್ತಿರುವ ಎಲೆಹಸಿರು ಭಾಗ 3) ಎಳೆಗೋಧಿ ಬಣ್ಣ 4) ಬಣ್ಣ ಗಮನಿಸದಷ್ಟು ಒಂದು ಭಾಗವಿರುತ್ತದೆ. ನಾಲ್ಕನೆಯ ಅಂಚಿನ ಕೊನೆಯಲ್ಲಿಯೂ ಸಹ ಸುಲಭವಾಗಿ ಗುರುತಿಸಬಹುದು. ಹೊರಗಿನಿಂದ ಮೂರು ದುಂಡನೆಯ ಭಾಗಗಳಿದ್ದು ಮಧ್ಯದಲ್ಲಿ ಕಣ್ಣಿನಂತೆ ಅಥವಾ ಕೇಂದ್ರವಾಗಿರುವ ನವಿಲುಗರಿಯನ್ನು ಬ್ರಹ್ಮವಿದ್ಯೆಯಾದ ಮತ್ತು ಯೋಗಶಾಸ್ತ್ರವಾದ ಗೀತಾಶಾಸ್ತ್ರವನ್ನು ಹೇಳಿದ ಶ್ರೀಕೃಷ್ಣನು ಧರಿಸುವುದರಲ್ಲಿ ದೊಡ್ಡ ಅರ್ಥವಿದೆ. ಅದರ ವಿವರ ಏನೆಂದರೆ!

ನಮ್ಮ ಶರೀರದಲ್ಲಿ ಶಿರೋಭಾಗದಲ್ಲಿ ಗುಣಗಳಿವೆ. ಶರೀರದಿಂದ ನಡೆಯುವ ಕಾರ್ಯಗಳಿಗೆಲ್ಲಾ ಕಾರಣವಾದ ಗುಣಗಳು ಒಂದು ಪದ್ಧತಿಯಾಗಿ ಅಳವಡಿಸಲ್ಪಟ್ಟಿವೆ. ಆ ಪದ್ಧತಿ ಒಂದು ಚಕ್ರವಾಗಿ ನಿರ್ಮಿತವಾಗಿದೆ. ಗುಣಗಳು ಮೂರು ವಿಧಗಳಾಗಿ ವಿಭಜಿಸಲ್ಪಟ್ಟಿವೆ. ಅವುಗಳ ಹೆಸರುಗಳು 1) ಸಾತ್ವಿಕ 2) ರಾಜಸ 3) ತಾಮಸ. ಈ ಮೂರು ವಿಧಗಳ ಗುಣಗಳು ಗುಣಚಕ್ರದಲ್ಲಿ

ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿವೆ. ಆ ಮೂರು ಭಾಗಗಳಿಗೆ ಸಾತ್ತ್ವಿಕ ಭಾಗ, ರಾಜಸ ಭಾಗ, ತಾಮಸ ಭಾಗ ಎಂದು ಹೆಸರುಗಳು ಇಡಲಾಗಿದೆ. ಈ ಮೂರು ಭಾಗಗಳಿಗೆ ಮಧ್ಯದಲ್ಲಿ ದುಂಡನೆಯ ಭಾಗವೊಂದಿದೆ. ಅದನ್ನೇ ಬ್ರಹ್ಮನಾಡಿ ಎನ್ನುತ್ತಿದ್ದೇವೆ. ಅದರಲ್ಲಿಯೇ ಆತ್ಮ ನಿವಾಸವಾಗಿದೆ. ಆತ್ಮ ನಿವಾಸವಿರುವ ಬ್ರಹ್ಮನಾಡಿಯನ್ನು ಆಧಾರವಾಗಿ ಮಾಡಿಕೊಂಡು ಕಣ್ಣಿಗೆ ಕಾಣಿಸದ ಗುಣಚಕ್ರ ಜೋಡಣೆಯಾಗಿದೆ. ಅದರ ಜೋಡಣೆ ಕೆಳಗಿನ ಚಿತ್ರದಲ್ಲಿ ನೋಡಬಹುದು.

ನಾನಾಗಲಿ, ನೀನಾಗಲಿ, ಸರ್ವಜೀವಿಗಳಾಗಲಿ ಈ ಗುಣಚಕ್ರದಲ್ಲಿಯೇ ಸಿಲುಕಿಕೊಂಡಿದ್ದೇವೆ. ಈ ಮೂರು ಭಾಗಗಳಲ್ಲಿ ಜೀವಾತ್ಮ ಹೆಚ್ಚಾಗಿ ಯಾವ ಭಾಗದಲ್ಲಿ ಇರುತ್ತಾನೋ, ಆ ಜೀವಾತ್ಮಕ್ಕೆ ಆ ಭಾಗವೊಂದರ ಹೆಸರು ಇಡಲಾಗಿದೆ. ತಾಮಸ ಭಾಗದಲ್ಲಿ ಹೆಚ್ಚಿನ ಕಾಲವಿರುವ ಜೀವಾತ್ಮವನ್ನು ತಾಮಸನೆಂದು, ರಾಜಸ ಗುಣಭಾಗದಲ್ಲಿರುವ ಜೀವಾತ್ಮನನ್ನು ರಾಜಸನೆಂದು, ಸಾತ್ತ್ವಿಕದಲ್ಲಿರುವ ಜೀವಾತ್ಮನನ್ನು ಸಾತ್ತ್ವಿಕನೆಂದು ಹೆಸರು ಇಡಲಾಗಿದೆ. ಯಾವ ಭಾಗದಲ್ಲಿರುವ ಜೀವಿಗಾದರೂ ಮಧ್ಯದಲ್ಲಿರುವ ಆತ್ಮವೇ ಸಾಕ್ಷಿಯಾಗಿದೆ. ಮಧ್ಯದಲ್ಲಿರುವ ಆತ್ಮಕ್ಕೆ ತಿಳಿಯದ ಜೀವರಾಶಿ ಇಲ್ಲ. ಪ್ರತಿ ಶರೀರದಲ್ಲಿರುವ ಗುಣಚಕ್ರದ ಮಧ್ಯದಲ್ಲಿರುವ ಆತ್ಮ ತನ್ನ ಸುತ್ತಲೂ ಇರುವ ಗುಣಗಳೊಂದಿಗೆ ಸಂಬಂಧ ಇಲ್ಲದೆ ಸಾಕ್ಷಿಯಾಗಿದೆ.

ಪ್ರತಿ ಜೀವರಾಶಿ ಗುಣಗಳಿಂದ ಕೆಲಸಮಾಡುತ್ತಿದೆ. ಮಾಡುವ ಕೆಲಸಗಳಿಂದ ಪಾಪಪುಣ್ಯಗಳು ಆ ಜೀವಿಗೆ ಸಂಭವಿಸುತ್ತಿವೆ. ಪಾಪಪುಣ್ಯ ಕರ್ಮಗಳು ಜೀವಾತ್ಮಕ್ಕೇ ಹೊರತು ಮಧ್ಯದಲ್ಲಿರುವ ಆತ್ಮಕ್ಕೆ ಅಂಟುವುದಿಲ್ಲ. ಆತ್ಮಶಕ್ತಿಯೇ ಶರೀರವೆಲ್ಲಾ ವ್ಯಾಪಿಸಿ ಚಲನೆ ಕೊಡುವುದಾದರೂ, ಆ ಚಲನೆಗಳು ಗುಣಗಳನ್ನು ಅನುಸರಿಸಿರುತ್ತವೆ. ಆ ಗುಣಗಳು ಕರ್ಮವನ್ನು ಅನುಸರಿಸಿರುತ್ತವೆ. ಶರೀರದಲ್ಲಿ ಗುಣಗಳ ಆದೇಶಗಳ ಪ್ರಕಾರ ವಿವಿಧ ಕೆಲಸಗಳು ನಡೆಯುತ್ತಿದ್ದರೂ, ಆ ಕೆಲಸಗಳಿಗೆ ಶಕ್ತಿಕೊಡುವುದಾದ ಆತ್ಮಕ್ಕೆ ಮಾತ್ರ ಕರ್ಮಅಂಟದೆ ಎಲ್ಲವುದಕ್ಕೂ ಸಾಕ್ಷಿಯಾಗಿದೆ.

ನವಿಲುಗರಿಯಲ್ಲಿ ಮಧ್ಯದಲ್ಲಿರುವ ಗುರುತಿನ ಭಾಗವು ಗುಣಚಕ್ರದಲ್ಲಿ ಮಧ್ಯದಲ್ಲಿರುವ ಆತ್ಮ ನಿವಾಸಸ್ಥಾನವೆಂದು ತಿಳಿಯಬೇಕು. ಅದಕ್ಕೆ ಸುತ್ತಲೂ ಇರುವ ಎರಡನೇ ಭಾಗವನ್ನು ಸಾತ್ವಿಕಭಾಗವೆಂದೂ, ಅದರ ಸುತ್ತ ಇರುವ ಮೂರನೇ ಭಾಗವನ್ನು ರಾಜಸಭಾಗವೆಂದು, ಹಾಗೆ ಕೊನೆಯ ನಾಲ್ಕನೇ ಭಾಗವನ್ನು ತಾಮಸಭಾಗವೆಂದು ತಿಳಿಯಬೇಕು. ಈ ವಿಧವಾಗಿ ನವಿಲುಗರಿ ಯಿಂದ ಗುಣಚಕ್ರಕ್ಕೆ ಸಮಾನ ಹೋಲಿಕೆಗಳಿವೆ. ಶ್ರೀಕೃಷ್ಣನು ನಾನು ಕೆಲಸಗಳು ಮಾಡುತ್ತಿದ್ದೇನೆ, ನನಗೆ ಯಾವ ಗುಣಕರ್ಮ ಅಂಟುವುದಿಲ್ಲ. ನಾನು ಮೂರು ಗುಣಗಳ ಮಧ್ಯೆ ಕರ್ಮ ಅಂಟದ ಆತ್ಮವಾಗಿದ್ದೇನೆಂದು ತಿಳಿಸುವ ನಿಮಿತ್ತವೇ ಮೂರು ಬಣ್ಣಗಳ ಮಧ್ಯದಲ್ಲಿ ಗುರುತಾಗಿ ಕಾಣಿಸುವ ಪ್ರತ್ಯೇಕ ಬಣ್ಣವಿರುವ ನವಿಲುಗರಿಯನ್ನು ಧರಿಸಿದ್ದಾನೆ.

ನಮ್ಮ ಶರೀರದಲ್ಲಿ ಬ್ರಹ್ಮನಾಡಿ ತಲೆಯಿಂದ ಗುದಸ್ಥಾನದವರೆಗೂ ಬೆನ್ನುಮೂಳೆಯ ಮಧ್ಯದಲ್ಲಿ ವ್ಯಾಪಿಸಿದೆ. ಈ ನಾಡಿಯಲ್ಲಿಯೇ ಆತ್ಮ ವಾಸವಿದ್ದು, ತನ್ನ ಶಕ್ತಿಯನ್ನು ಬೆನ್ನುಮೂಳೆಗೆ ಎರಡು ಕಡೆ ಬ್ರಹ್ಮನಾಡಿಯಿಂದ ಸೀಳಿಹೋಗಿರುವ ಸಣ್ಣ ನರಗಳ ಮೂಲಕ ಶರೀರವೆಲ್ಲಾ ವ್ಯಾಪಿಸುವಂತೆ ಮಾಡಿ, ಎಲ್ಲಾ ಅವಯವಗಳು ಕದಲುವಂತೆ ಮಾಡುತ್ತಿದೆ. ಮೇಲೆ ಶಿರಸ್ಸಿನಲ್ಲಿನ ಗುಣಚಕ್ರದಿಂದ ಬರುವ ಆದೇಶಗಳು ಬ್ರಹ್ಮನಾಡಿ ನರಗಳ ಮೂಲಕ ಕೊನೆಗೆ ಅವಯವಗಳಿಗೆ ಸೇರಿಕೊಳ್ಳುತ್ತಿವೆ. ಅವಯವಗಳಿಂದ ಬರುವ ವಿಷಯಗಳೂ ಸಹ ಬ್ರಹ್ಮನಾಡಿಯಿಂದಲೇ ಮೇಲಕ್ಕೆ ಸೇರುತ್ತಿವೆ. ಬ್ರಹ್ಮನಾಡಿಯೊಂದರ ಸಣ್ಣ ನರಗಳ ಜೋಡಣೆ ನವಿಲುಗರಿಯನ್ನು ಗಮನಿಸಿದರೆ ಅರ್ಥವಾಗುತ್ತದೆ. ನವಿಲುಗರಿಯೊಂದರ ಕಾಂಡ ದಪ್ಪವಾಗಿ, ಬೆಳ್ಳಗೆ ಪ್ರಾರಂಭಗೊಂಡು ಉದ್ದವಾಗಿರುತ್ತದೆ. ಆ ಕಾಂಡವನ್ನು ಬ್ರಹ್ಮನಾಡಿಯಾಗಿ ಅರ್ಥ ಮಾಡಿಕೊಳ್ಳಬೇಕು. ನವಿಲುಗರಿಯೊಂದರ ಕಾಂಡದ ಉದ್ದಕ್ಕೂ ಚಿಕ್ಕ ಚಿಕ್ಕ ರೆಕ್ಕೆಯ ಕೂದಲು ಎರಡು ಕಡೆ ವ್ಯಾಪಿಸಿರುತ್ತವೆ. ಅವುಗಳನ್ನು ಬ್ರಹ್ಮನಾಡಿಯಿಂದ ಹೊರಟ ಚಿಕ್ಕ ಚಿಕ್ಕ ನಾಡಿಗಳಂತೆ ಗುರುತಿಸಿಕೊಳ್ಳಬೇಕು. ನವಿಲುಗರಿಯ ಮೇಲೆ ಕಾಣಿಸುವ ನಾಲ್ಕು ಭಾಗಗಳನ್ನು ಗುಣಚಕ್ರ ಭಾಗಗಳಾಗಿ ಲೆಕ್ಕಿಸಿಕೊಳ್ಳಬೇಕು.




**ಗುಣಚಕ್ರ**

ತಲೆಯಲ್ಲಿನ ಗುಣಚಕ್ರವನ್ನು ಮತ್ತು ಬ್ರಹ್ಮನಾಡಿಯನ್ನು ಹೋಲುವ ನವಿಲುಗರಿಯನ್ನು ಶ್ರೀಕೃಷ್ಣನು ಧರಿಸುವುದರಲ್ಲಿ ವಿಶೇಷಗಳು 1) ಸರ್ವ ಜೀವರಾಶಿಗಳ ಶರೀರದಲ್ಲಿ ಈ ವಿಧದ ಜೋಡಣೆ ಇದೆಯೆಂಬ ಜ್ಞಾನ ತಿಳಿಸುವ ನಿಮಿತ್ತ ನವಿಲುಗರಿಯನ್ನು ಧರಿಸಿದ್ದಾನೆ. 2) ಸರ್ವಜೀವರಾಶಿಗಳಿಗೆ ಆತ್ಮ ಸಾಕ್ಷಿಯಾಗಿದೆ ಎಂಬ ಸೂಚನೆ ನಿಮಿತ್ತ ನವಿಲುಗರಿಯನ್ನು ಧರಿಸಿದ್ದಾನೆ. 3) ಆತ್ಮ ಮೂರು ಗುಣಗಳಿಗೆ ಮಧ್ಯದಲ್ಲಿದ್ದು, ಯಾವ ಗುಣಗಳಿಗೂ ಸಂಬಂಧ ಇಲ್ಲವೆಂದು ತಿಳಿಸುವ ನಿಮಿತ್ತ ನವಿಲುಗರಿಯನ್ನು ಧರಿಸಿದ್ದಾನೆ. 4) ಯಾವ ಕೆಲಸಗಳು ಮಾಡುತ್ತಿದ್ದರೂ ಅವುಗಳ ಕರ್ಮ ಮಧ್ಯದಲ್ಲಿರುವ ನನಗೆ ಅಂಟುವುದಿಲ್ಲವೆಂದು ತಿಳಿಸುವುದಕ್ಕೋಸ್ಕರ ನವಿಲುಗರಿ ಧರಿಸಿದ್ದಾನೆ. 5) ಸರ್ವಜೀವರಾಶಿಗಳ ಶಿರಸ್ಸಿನಲ್ಲಿಯೇ ಆತ್ಮ ಮತ್ತು ಗುಣಗಳಿವೆಯೆಂದು ತಿಳಿಸುವುದಕ್ಕಾಗಿ ತಲೆ ಮೇಲೆ ನವಿಲುಗರಿ ಧರಿಸಿದ್ದಾನೆ. 6) ಕೊನೆಯ ಅಂಚು ಬಣ್ಣ ತೆಳುವಾದುದಾಗಿ, ಎರಡನೆಯದು ಅದಕ್ಕಿಂತ ಹೆಚ್ಚಾಗಿ ಕಾಣಿಸುವುದಾಗಿ, ಮೂರನೆಯದು ಎಡನೆಯದಕ್ಕಿಂತ ಮತ್ತಷ್ಟು ಹೆಚ್ಚಾಗಿ ಕಾಣಿಸುವುದಾಗಿ, ನಾಲ್ಕನೆಯದು ಎಲ್ಲದಕ್ಕಿಂತ ಹೆಚ್ಚಾಗಿ ಕಾಣಿಸುವುದಾಗಿದೆ. ಅಂತಹ ನವಿಲುಗರಿ

ಧರಿಸುವುದರಲ್ಲಿ ಯಾವ ಜೀವರಾಶಿಯಾದರೂ ಕೊನೆಗೆ ಇಲ್ಲಿಗೆ ಬರಬೇಕಾಗಿದ್ದೇ ಎಂದು ಅರ್ಥ ತಿಳಿಯಬೇಕು. 7) ಎರಡನೆ ಅಧ್ಯಾಯವಾದ ಕರ್ಮಯೋಗ 28ನೇ ಶ್ಲೋಕದಲ್ಲಿ **'ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ ಗುಣಾಗುಣೇಷು ವರ್ತನ್ತ ಇತಿ ಮತ್ವಾನ ಸಜ್ಜತೇ'** ಗುಣಕರ್ಮ ವಿಭಾಗಗಳು ತಿಳಿದವನು ಆತ್ಮವನ್ನು ತಿಳಿದವನಾಗುತ್ತಾನೆ. ಅಂತಹವನು ಗುಣಗಳಿಂದ ನಡೆಯುವ ಕೆಲಸಗಳು ಎಷ್ಟು ಮಾಡುತ್ತಿದ್ದರೂ, ಮಾಡದವನೇ ಎಂದು ತಿಳಿಸುವ ನಿಮಿತ್ತ ಶ್ರೀಕೃಷ್ಣನು ನವಿಲುಗರಿಯನ್ನು ಧರಿಸಿದ್ದಾನೆ.

ಈಗ ಅಸಲು ವಿಷಯಕ್ಕೆ ಬರೋಣ. ಭಗವಂತನು ಮೇಲಿನ ಶ್ಲೋಕದಲ್ಲಿ ಹೇಳಿದ ನಾಲ್ಕು ವರ್ಣಗಳು ಗುಣಚಕ್ರದಲ್ಲಿನ ನಾಲ್ಕು ಭಾಗಗಳೇ ಎಂದು ತಿಳಿಯಬೇಕು. ಅವುಗಳ ಪ್ರಕಾರ ಹೊರಗೆ ಮೊದಲ ಭಾಗದಲ್ಲಿರುವವರು ತಾಮಸರು, ಎರಡನೆ ಭಾಗದಲ್ಲಿರುವವರು ರಾಜಸರು, ಮೂರನೆ ಭಾಗದಲ್ಲಿ ಇರುವವರು ಸಾತ್ತ್ವಿಕರು, ನಾಲ್ಕನೆ ಭಾಗದಲ್ಲಿರುವವರು ಯೋಗಿಗಳು. ಯೋಗವನ್ನಾಚರಿಸುವವರು ಗುಣರಹಿತರಾಗಿ ಆತ್ಮವನ್ನು ಹೊಂದಿದವರಾದ್ದರಿಂದ ಅವರನ್ನು ಯೋಗಿಗಳೆನ್ನುವುದು ನಡೆದಿದೆ. ಈ ಲೆಕ್ಕದ ಪ್ರಕಾರ ಸರ್ವ ಜೀವರಾಶಿಗಳಲ್ಲಿಯೂ ನಾಲ್ಕು ವರ್ಣಗಳು ಇವೆಯೆಂದು ಅವುಗಳೇ **ತಾಮಸರು, ರಾಜಸರು, ಸಾತ್ತ್ವಿಕರು, ಯೋಗಿಗಳೆಂದು** ಕರೆಯಲ್ಪಡುತ್ತಿವೆಯೆಂದು ತಿಳಿಯುತ್ತಿದೆ. ಈ ನಾಲ್ಕು ವರ್ಣಗಳೊಂದಿಗೆ ಪರಮಾತ್ಮ ಸಂಬಂಧವಿಲ್ಲದವನಾಗಿ ಇದ್ದಾನೆ. ಆದ್ದರಿಂದ ಅವುಗಳಿಗೆ ಕರ್ತನಾಗಿ ಆಗದಂತಿದ್ದೇನೆಂದು ಹೇಳಿದ್ದಾನೆ. ಈಗ ದೈವ ನಿರ್ಮಿತವಾದ ನಾಲ್ಕು ವರ್ಣಗಳು ಸರ್ವ ಜೀವರಾಶಿಗಳಿಗು ಸಂಕ್ರಮಿಸಿದ ನಾಲ್ಕು ವರ್ಣಗಳೆಂದು ತಿಳಿದಿದೆಯಾ!

ಭಗವದ್ಗೀತಾ ಶ್ಲೋಕ ಭಾವನೆಯನ್ನನುಸರಿಸಿ ಅದರ ವಿವರವನ್ನನುಸರಿಸಿ ನೋಡಿದರೆ ದೇವರು ತಾನು ಸೃಷ್ಟಿಸಿದ ಮನುಷ್ಯರನ್ನು ಗುಣಗಳು ಇರುವವರು ಮೂರು ಭಾಗಗಳಲ್ಲಿ, ಗುಣಗಳು ಇಲ್ಲದವರು ಒಂದು ಭಾಗದಲ್ಲಿ ಇರುವುದಕ್ಕೆ ಅವಕಾಶವಿದೆಯೆಂದು ಹೇಳಿದ್ದಾರೆ. ಇದನ್ನನುಸರಿಸಿ ಮೂರು ಗುಣಭಾಗ ಗಳಲ್ಲಿರುವವರೇ ಪ್ರಪಂಚವೆಲ್ಲಾ ಇದ್ದಾರೆ. ಗುಣ ರಹಿತ ಭಾಗವಾದ ಒಂದು



**ನವಿಲುಗರಿ**

ಭಾಗದಲ್ಲಿ ಪ್ರಪಂಚ ಜನಸಂಖ್ಯೆಯಲ್ಲಿ ಒಟ್ಟಾರೆ ಒಬ್ಬರು ಅಥವಾ ಇಬ್ಬರು ಅದಕ್ಕಿಂತ ಹೆಚ್ಚಾಗಿ ಅಂದರೆ ಏಕ ಸಂಖ್ಯೆ ಮೀರದಂತೆ ಒಂಬತ್ತು ಮಂದಿವರೆಗು ಒಂದು ಕಾಲದಲ್ಲಿ ಇರಬಹುದು.

**ಪ್ರಶ್ನೆ :– ಸ್ವಾಮಿ! ನೀವು ಗತದಲ್ಲಿ ಒಂದು ಸಲ ನಮ್ಮೊಂದಿಗೆ ಮಾತನಾಡುತ್ತಾ ಜ್ಞಾನವನ್ನು ಹೇಳುವಾಗ ನಮ್ಮ ಜ್ಞಾನ ತಿಳಿದು ಕೆಲವರು ಗುಣರಹಿತ ಯೋಗಿಗಳಾಗಿ ತಯಾರಾಗಿದ್ದಾರೆ. ಅಂತಹವರ ಸಂಖ್ಯೆ ಸುಮಾರು ಎರಡು ಅಂಕೆಗಳ ಸಂಖ್ಯೆ ತೊಂಭತ್ತೊಂಭತ್ತರ (99)ವರೆಗು ಇರಬಹುದು ಎಂದು ಹೇಳಿದ್ದೀರ. ಈಗ ಏಕಸಂಖ್ಯೆ ಒಂಭತ್ತು ಎಂದು ಹೇಳುತ್ತಿದ್ದೀರ. ಇದರಲ್ಲಿ ವಾಸ್ತವ ಯಾವುದು?**

**ಉತ್ತರ :–** ಆಗ ಹೇಳಿರುವುದು ಈಗ ಹೇಳುವುದು ಎರಡೂ ವಾಸ್ತವವೇ. ಹೇಗೆ ಎಂದರೇ ಯೋಗಿಗಳಲ್ಲಿ ಕರ್ಮಯೋಗಿಗಳು ಬೇರೆ, ಬ್ರಹ್ಮಯೋಗಿಗಳು ಬೇರೆ. ಈಗ ಹೇಳುವ ಗುಣರಹಿತ ಯೋಗಗಳು ಎರಡು ಅಂಕೆಗಳ ಸಂಖ್ಯೆ ಮೀರದಂತೆ ಹತ್ತರಿಂದ ತೊಂಭತ್ತೊಂಭತ್ತರವರೆಗು ಇರಬಹುದು. 80 ಇಲ್ಲವೆ 90 ಮಂದಿ ಇದ್ದಾರೆಂದುಕೊಳ್ಳೋಣ. ಅವರು ಎಲ್ಲವೇಳೆಯಲ್ಲಿ ಗುಣರಹಿತ ಬ್ರಹ್ಮಯೋಗದಲ್ಲಿ ಇರುವುದಿಲ್ಲ ಅಲ್ಲವೆ! ಯಾವುದೋ ಸ್ವಲ್ಪ ಸಮಯ ಮಾತ್ರ

ಗುಣಗಳು ಇಲ್ಲದಂತೆ ಬ್ರಹ್ಮಯೋಗದಲ್ಲಿದ್ದು ನಂತರ ಗುಣಗಳಲ್ಲಿ ಸೇರಿಹೋಗುತ್ತಿರುತ್ತಾರೆ. ಅಂತಹವರು ಏಕ ಕಾಲದಲ್ಲಿ ಲೆಕ್ಕ ನೋಡಿದರೆ ಬ್ರಹ್ಮಯೋಗದಲ್ಲಿ ಲಗ್ನವಾಗಿರುವವರು ಒಂದರಿಂದ ಒಂಭತ್ತರವರೆಗು ಇರಬಹುದು ಎಂದಿದ್ದೇನೆ. ಮೊದಲು ಹೇಳಿರುವುದು ಬ್ರಹ್ಮಯೋಗ ಮಾಡುವುದಕ್ಕೆ ಯೋಗ್ಯರು ಅರ್ಹರು ಆದವರು 10 ರಿಂದ 99 ರವರೆಗು ಇರಬಹುದು. ಅವರಲ್ಲಿ ಯೋಗದಲ್ಲಿ ಲಗ್ನವಾಗಿರುವವರು ಸುಮಾರು 1 ರಿಂದ 9 ರವರೆಗು ಇರಬಹುದು ಎಂದು ಹೇಳಿದ್ದೇನೆ. ನಾನು ಹೇಳಿರುವುದು ಸತ್ಯವೇ. ನಿಮಗೆ ಅರ್ಥವಾಗುವುದರಲ್ಲಿ ವ್ಯತ್ಯಾಸ ಬಂದಿದೆ.

ಕರ್ಮ ಎಂದರೇ ಪಾಪಪುಣ್ಯಗಳು ಎರಡೂ ಬೆರೆತಿರುವುದೆಂದು ಅರ್ಥ. ಬ್ರಹ್ಮ ಎಂದರೇ ದೊಡ್ಡದು ಎಂದು ಅರ್ಥ. ಒಂದುಕಡೆ ಪಾಪಪುಣ್ಯ ಕರ್ಮಗಳಿಂದ ನಡೆಯುವ ಕಾರ್ಯಗಳು ಶರೀರದಲ್ಲಿ ಆತ್ಮ ಮಾಡುತ್ತಿದ್ದರೂ, ಶರೀರದಲ್ಲಿನ ಜೀವಿಯು ಆ ಕಾರ್ಯಗಳಿಗೆ ತನಗೆ ಸಂಬಂಧ ಇಲ್ಲವೆಂದು ತಾನು ಏನು ಮಾಡದವನೆಂದು, ಕಾರ್ಯಗಳನ್ನು ಮಾಡುವುದು ಶರೀರದಲ್ಲಿನ ಆತ್ಮವೇಯೆಂದು ತಿಳಿದು, ತಾನು ಅಲ್ಲವೆನ್ನುವ ಜ್ಞಾನದಲ್ಲಿ, ತನಗೆ ನಾನೇ ಮಾಡುತ್ತಿದ್ದೇನೆನ್ನುವ ಭಾವನೆಯನ್ನು ಉಂಟುಮಾಡುವ ಅಹಮ್ ಮಾತು ಕೇಳದೆ, ಅಹಮ್ ಅಸತ್ಯವನ್ನು ಹೇಳುತ್ತಿದೆಯೆಂದು, ಅದರ ಭಾವವನ್ನು ಯಾರಾದರೆ ಹೊಂದುವುದಿಲ್ಲವೊ ಅವನು ಕರ್ಮಯೋಗಿ ಆಗುತ್ತಾನೆ. ಕರ್ಮಯೋಗಿ ಗುಣಗಳಿಂದ ಕೂಡಿ ಕೆಲಸ ಮಾಡುತ್ತಾ ಗುಣಗಳಲ್ಲಿಯೇ ನಿವಾಸಿಸುತ್ತಾ ಯೋಗವನ್ನು ಹೊಂದುತ್ತಾನೆ. ಆದ್ದರಿಂದ ಆತನು ಮೂರು ಗುಣ ಭಾಗಗಳಲ್ಲಿಯೇ ಇರುತ್ತಾನೆ. ಮೂರು ಗುಣ ಭಾಗಗಳಲ್ಲಿ ಇರುತ್ತಲೇ ಕರ್ಮಯೋಗವನ್ನು ಆಚರಿಸುತ್ತಾನೆ. ಗುಣಗಳಿಂದ ನಡೆಯುವ ಕೆಲಸಗಳನ್ನು ಗುಣಗಳಲ್ಲಿಯೇ ಕೂಡಿ ಆಚರಿಸುತ್ತಿರುತ್ತಾನೆ. ಆತ್ಮವೇ ಹಾಗೆ ಮಾಡುತ್ತಿರುತ್ತದೆ. ಹಾಗೆ ಗುಣಗಳಲ್ಲಿದ್ದು ಮಾಡುವುದು ಕರ್ಮಯೋಗ. ಆದ್ದರಿಂದ ಅದನ್ನು ಗುಣರಹಿತ ಯೋಗ ಎಂದು ಹೇಳುವುದಿಲ್ಲ. ಅದು ಗುಣರಹಿತ ಯೋಗವಲ್ಲ.

ಗುಣರಹಿತ ಯೋಗವನ್ನು ಬ್ರಹ್ಮಯೋಗ ಎಂದು ಕರೆಯುತ್ತೇವೆ. ನಾನು ಹೇಳುವುದು ಗುಣರಹಿತ ಯೋಗವೊಂದರ ವಿಷಯ. ಕರ್ಮಯೋಗದಲ್ಲಿ ಎಷ್ಟುಜನರಾದರೂ ಇರಬಹುದು. ಆದರೆ ಬ್ರಹ್ಮಯೋಗದಲ್ಲಿ ಒಂದೇ ಕಾಲದಲ್ಲಿ 1 ರಿಂದ 9 ಜನರ ವರೆಗು ಇರಬಹುದೆಂದು ಹೇಳಿದ್ದೇನೆ. 9 ರವರೆಗು ಎಂದು ಹೇಳಿದ್ದೇನೆ ಆದರೆ, ನಿಖರವಾಗಿ 9 ಜನರೆಂದು ಹೇಳಲಿಲ್ಲ. ಒಂದು ಕಾಲದಲ್ಲಿ ಒಬ್ಬನಾದರೂ ಇರಬಹುದು ಅಥವಾ ಇಬ್ಬರಾದರೂ ಇರಬಹುದು.

ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಧರ್ಮಯುಕ್ತವಾದ ಯೋಗಗಳನ್ನು ಎರಡನ್ನೇ ಹೇಳಿದ್ದಾರೆ. ಆ ಎರಡರಲ್ಲಿ ಒಂದು ಕರ್ಮಯೋಗ, ಎರಡು ಬ್ರಹ್ಮಯೋಗ. ಎರಡು ಯೋಗಗಳು ಕರ್ಮಗಳಿಂದ ತಪ್ಪಿಸಿಕೊಂಡು ಮೋಕ್ಷ ಹೊಂದುವುದಕ್ಕೆ ಕೆಲಸಕ್ಕೆ ಬರುತ್ತವೆ. ಆದ್ದರಿಂದ ಎರಡು ಯೋಗಗಳು ಒಂದು ವಿಧವಾಗಿ ಸಮಾನವೇಯೆಂದು ಹೇಳಿದರೂ, ಅವುಗಳನ್ನು ಆಚರಿಸುವುದರಲ್ಲಿ ಸ್ವಲ್ಪ ಸುಲಭವಾದುದು ಕರ್ಮಯೋಗ, ಬಹಳ ಕಷ್ಟವಾದುದು ಬ್ರಹ್ಮಯೋಗ. ಕಷ್ಟವಾದ ಯೋಗ ಆಗಿರುವುದರಿಂದ ಅದನ್ನು ಬ್ರಹ್ಮ (ದೊಡ್ಡ) ಯೋಗ ಎಂದು ಹೇಳಿದ್ದಾರೆ. ಫಲಿತದಲ್ಲಿ ಎರಡೂ ಸಮಾನವೇ ಆದರೂ, ಸಾಧನೆಯಲ್ಲಿ ದೊಡ್ಡದು ಬ್ರಹ್ಮಯೋಗವೇ. ಬ್ರಹ್ಮ ಎಂದರೇ ದೊಡ್ಡದೆಂದು ಅರ್ಥ. ಬ್ರಹ್ಮ ಎಂದರೇ ದೇವರು ಎಂದು ಅರ್ಥ. ಪರಬ್ರಹ್ಮ ಎಂದರೇ ದೇವರಿಗಿಂತ ಪ್ರತ್ಯೇಕವಾಗಿರುವವನು ಎಂದು ಅರ್ಥ. ದೇವರು ಎಂದರೇ ಆತ್ಮಯೆಂದು ಹೇಳಬಹುದು. ನೀನು ನಿವಾಸಿಸುವ ಶರೀರದಲ್ಲಿ ಆತ್ಮವೇ ದೊಡ್ಡದು. ಶರೀರದಲ್ಲಿ ಅಧಿಪತಿ ಆತ್ಮವೆ, ಶರೀರದಲ್ಲಿ ದೇವರು ಆತ್ಮವೆ. ಶರೀರದಲ್ಲಿ ಬ್ರಹ್ಮ ಆತ್ಮವೆ. ಶರೀರದಲ್ಲಿ ಬ್ರಹ್ಮ (ದೊಡ್ಡದಾಗಿ) ಆಗಿ ಇರುವವನು ಆತ್ಮವಾಗಿದ್ದು, ಆತ್ಮವನ್ನು ದೇವರಾಗಿ ನೇಮಿಸಿ, ಮನುಷ್ಯನ ಕರ್ಮವನ್ನು ತೀರ್ಪುಕೊಟ್ಟು ಪ್ರಾರಬ್ಧಕರ್ಮವನ್ನು ನಿರ್ಣಯಿಸಿ ಮರಣದಲ್ಲಿ ಎರಡನೆ ಜನ್ಮಕ್ಕೆ ಕಳಿಸುವ ಅಧಿಕಾರವನ್ನು ಆತ್ಮಗೆ ಕೊಟ್ಟವನು, ಆತ್ಮಗಿಂತ ಪ್ರತ್ಯೇಕವಾಗಿರುವ ಪರಮಾತ್ಮ. ಪರಮಾತ್ಮ ಪ್ರಪಂಚವನ್ನು ಸರ್ವವನ್ನು ಸೃಷ್ಠಿಸಿದ ನಂತರ ಆತ್ಮವನ್ನು ದೇವರಾಗಿ

ನೇಮಿಸಿ, ಮನುಷ್ಯರ ಮರಣದಲ್ಲಿ ತೀರ್ಪುಕೊಟ್ಟು ಲೋಕದೊಳಗೆ ಕಳಿಸುವುದಾಗಲಿ, ತೀರ್ಪಿನಲ್ಲಿ ಕರ್ಮ ಮುಗಿದುಹೋಗಿದ್ದರೆ ಪರಲೋಕ (ಮೋಕ್ಷ)ಕ್ಕೆ ಕಳಿಸುವುದಾಗಲಿ ಮಾಡುವ ಅಧಿಕಾರವನ್ನು ಆತ್ಮಗೆ ಕೊಟ್ಟಿದ್ದಾನೆ. ಅಷ್ಟೇ ಅಲ್ಲದೆ ಆತನು ಆತ್ಮಗಿಂತ ಬೇರೆಯಾದ ದೇವರು ಅಂದರೇ ಬ್ರಹ್ಮನಿಗಿಂತ ಪ್ರತ್ಯೇಕವಾಗಿರುವ ಪರಬ್ರಹ್ಮನಾದ ದೇವರು ಸರ್ವಮಾನವರೆಲ್ಲರೂ ಆರಾಧಿಸುವುದಕ್ಕೆ ಅರ್ಹನಾದ ದೇವರು ಆತ್ಮವೇಯೆಂದು, ಆತ್ಮವನ್ನು ಎಲ್ಲರ ದೇವರಾಗಿ ನಿರ್ಣಯಿಸಿ, ಸರ್ವ ಅಧಿಕಾರಗಳು ಕೊಟ್ಟು, ಆತನು ಮೌನವಾಗಿ ಏನು ಮಾಡದವನಾಗಿ, ಸಾಕ್ಷಿಯಾಗಿ ಶರೀರದಲ್ಲಿಯೂ, ಶರೀರದ ಹೊರಗೆ ಇದ್ದು ಹೋಗಿ, ಶರೀರದಲ್ಲಿ ನಿವಾಸಿಸುವ ಜೀವಾತ್ಮಗೆ ದೊಡ್ಡದಾಗಿ, ದೇವರಾಗಿ, ಜನ್ಮಗಳಿಗಾಗಲಿ, ಮೋಕ್ಷಕ್ಕಾಗಲಿ ಕಳಿಸುವವನಾಗಿ ಆತ್ಮನೇ ಇದ್ದಾನೆ.

ಅಧಿಕಾರಗಳೆಲ್ಲ ಆತ್ಮಗೆ ಕೊಟ್ಟ ಪರಮಾತ್ಮದೊಂದಿಗೆ ಯಾರಿಗೂ ಕೆಲಸವಿಲ್ಲ. **ಎಲ್ಲರೂ ಆರಾಧಿಸುವುದಕ್ಕೆ ಯೋಗ್ಯತೆ ಹೊಂದಿದ ದೇವರು ಆತ್ಮವೇ.** ಈ ಮಾತು ಮೂರು ದೈವ ಗ್ರಂಥಗಳ ಸಾರಾಂಶದಿಂದ ಹೇಳುತ್ತಿರುವ ಸತ್ಯ. 'ದೊಡ್ಡದು' ಎನ್ನುವ ಮಾತು ಅನ್ವಯಿಸುವುದು ಆತ್ಮಗೆ. ಆತ್ಮವನ್ನು ಸೃಷ್ಟಿಸಿ ಎಲ್ಲಾ ಅಧಿಕಾರಗಳು ಕೊಟ್ಟಿರುವ ಪರಮಾತ್ಮ ಆತ್ಮಗಿಂತ ದೊಡ್ಡವನೇ ಆದರೂ, ಆತನು ಮಾನವರೊಂದಿಗೆ ಸಂಬಂಧ ಇಲ್ಲದವನಾಗಿ ಏನೂ ಮಾಡದವನಾಗಿ, ಏನೂ ಅಲ್ಲದವನಾಗಿ ಹೋಗಿದ್ದಾನೆ. ಕೇವಲ ಸಾಕ್ಷಿಯಾಗಿರುವ ಪರಮಾತ್ಮ ಯಾರ ಆರಾಧ್ಯ ದೈವವು ಕೂಡಾ ಅಲ್ಲದೆ, ಎಲ್ಲದಕ್ಕು ಅತೀತವಾಗಿ ಮನುಷ್ಯನೊಂದಿಗೆ ಯಾವ ಸಂಬಂಧ ಇಲ್ಲದವನಾಗಿ, ಮನುಷ್ಯನಿಗೆ ತಿಳಿಯದಂತೆ ಇದ್ದಾನೆ. ಎಲ್ಲರಿಗೂ ತಿಳಿದ ದೇವರು, ಎಲ್ಲರಿಗೂ ದೊಡ್ಡವನಾದವನು ಆತ್ಮವೇ. ಆದ್ದರಿಂದ ಮನುಷ್ಯ ಕಲಿಯಬೇಕಾಗಿರುವುದು ಆತ್ಮಜ್ಞಾನವನ್ನೇ ಹೊರತು, ಪರಮಾತ್ಮ ಜ್ಞಾನವನ್ನು ಅಲ್ಲ. ಆತ್ಮವೊಂದರ ಸಂಪೂರ್ಣ ಜ್ಞಾನವನ್ನು ತಿಳಿದರೆ ಆತ್ಮವನ್ನು ದೇವರಾಗಿ ನೇಮಿಸಿ ತೆರೆಹಿಂದಕ್ಕೆ ಕಾಣಿಸದಂತೆ ಹೋದವನು ಪರಮಾತ್ಮಯೆಂದು ತಿಳಿಯಬಲ್ಲದು. ಆತ್ಮಜ್ಞಾನವನ್ನೇ ಬ್ರಹ್ಮವಿದ್ಯೆಯೆಂದು

ಹೇಳಿದ್ದಾರೆ. ಬ್ರಹ್ಮವಿದ್ಯೆ ಎಂದರೇ ದೊಡ್ಡವಿದ್ಯೆ ಎಂದು ಅರ್ಥ. ಶಾಸ್ತ್ರಗಳಲ್ಲಿ ಆತ್ಮಜ್ಞಾನ ಇರುವ ಶಾಸ್ತ್ರವನ್ನೇ ಬ್ರಹ್ಮವಿದ್ಯಾ ಶಾಸ್ತ್ರ ಎಂದು ಹೇಳಿದ್ದಾರೆ.

ಪ್ರಪಂಚದಲ್ಲಿ ಯಾವ ವಿದ್ಯೆ ಕಲಿತರೆ ಅವನಿಗೆ ಆ ಹೆಸರು ಇಡುವುದು ಪರಿಪಾಟಯಾಗಿದೆ. ನ್ಯಾಯವಿದ್ಯೆ ಕಲಿತರೆ ಅವನನ್ನು ನ್ಯಾಯವಾದಿ ಎನ್ನುತ್ತಾರೆ. ಮೊಟಾರು ಕಾರನ್ನು ನಡೆಸಿದರೆ ಡ್ರೈವರ್ ಎನ್ನುತ್ತಾರೆ. ಯಂತ್ರಗಳನ್ನು ರಿಪೇರಿ ಮಾಡುವವನನ್ನು ಮೆಕಾನಿಕ್ ಎನ್ನುತ್ತಾರೆ. ನಿರ್ಮಾಣ ಕೆಲಸಗಳ ವಿದ್ಯೆ ಕಲಿತರೇ ಇಂಜನೀರ್ ಎನ್ನುತ್ತಾರೆ. ಹಾಡುಗಳು ಹಾಡುವ ಸಂಗೀತವನ್ನು ಕಲಿತರೇ ಅವನನ್ನು ಸಿಂಗರ್‌ಯೆಂದು, ನಟಿಸುವುದು ಕಲಿತರೇ ಯಾಕ್ಟರ್ ಎಂದು, ವೈದ್ಯ ವಿದ್ಯೆಯನ್ನು ಕಲಿತರೇ ಡಾಕ್ಟರ್‌ಯೆಂದು, ವಿದ್ಯೆಯನ್ನು ಅನುಸರಿಸಿ ಅವನಿಗೆ ಹೆಸರು ಬರುವುದು ನಡೆಯುತ್ತಿರುತ್ತದೆ. ಹಾಗೆಯೇ ಆಧ್ಯಾತ್ಮಿಕ ವಿದ್ಯೆ ಕಲಿತರೇ ಅವನು ಬ್ರಹ್ಮವಿದ್ಯೆ ಕಲಿತವನು ಆಗಿರುವುದರಿಂದ ಅವನನ್ನು **'ಬ್ರಾಹ್ಮಣ'** ಎನ್ನುವುದು ನಡೆಯುತ್ತಿದೆ. ಇವೆಲ್ಲವೂ ಪೂರ್ವದಿಂದ ಬರುವ ಸಹಜವಾದ ಹೆಸರುಗಳು. ಭೂಮಿಮೇಲೆ ಯಾವ ಮತಸ್ಥನಾದರೂ, ಯಾವ ಕುಲಸ್ಥನಾದರೂ ನ್ಯಾಯವಿದ್ಯೆ ಕಲಿತರೇ ಅವನನ್ನು ಲಾಯರ್ (ನ್ಯಾಯವಾದಿ) ಎನ್ನುವಂತೆ, ಬ್ರಹ್ಮವಿದ್ಯೆಯನ್ನು ಯಾರು ಕಲಿತರೂ, ಯಾವ ಮತಸ್ಥನು ಕಲಿತರೂ, ಯಾವ ಕುಲಸ್ಥನು ಕಲಿತರೂ ಅವನನ್ನು ಬ್ರಾಹ್ಮಣ ಎಂದು ಹೇಳಬಹುದು. ಕಾನೂನು ತಿಳಿದವನನ್ನು (ಲಾ ತಿಳಿದವನನ್ನು) ಲಾಯರ್ ಎನ್ನುವಂತೆ, ಬ್ರಹ್ಮವಿದ್ಯೆಯನ್ನು ತಿಳಿದವನನ್ನು ಬ್ರಾಹ್ಮಣ ಎಂದು ಕರೆಯಬಹುದು.

ಬ್ರಾಹ್ಮಣ ಎನ್ನುವ ಪದ ಕುಲ ಮತಗಳಿಗೆ ಅತೀತವಾಗಿದೆ. ಗಾಡಿಯನ್ನು ನಡೆಸುವ ವಿದ್ಯೆಯನ್ನು ಕಲಿತವನು ಮೊದಲೇ ಯಾವುದೊ ಒಂದು ಕುಲದವನಾಗಿರುತ್ತಾನೆ. ಅವನು ಯಾವ ಕುಲದವನಾದರೂ ಆ ಕುಲದೊಂದಿಗೆ ಯಾವುದೆ ಸಂಬಂಧ ಇಲ್ಲದಂತೆ ಹೇಗೆ ಅವನನ್ನು ಡ್ರೈವರ್ ಅನ್ನುತ್ತಿದ್ದೇವೊ, ಹಾಗೆಯೇ ಬ್ರಹ್ಮವಿದ್ಯೆ ಕಲಿಯುವವನು ಮೊದಲೇ ಯಾವುದೋ ಒಂದು ಕುಲಕ್ಕೆ ಸಂಬಂಧಿಸಿದವನಾಗಿರುತ್ತಾನೆ. ಬ್ರಹ್ಮವಿದ್ಯೆ ಕಲಿತವನ ಕುಲದೊಂದಿಗೆ

ಸಂಬಂಧವಿಲ್ಲದೆ ಅವನು ಕಲಿತ ವಿದ್ಯೆಯನ್ನು ಅನುಸರಿಸಿ ಅವನನ್ನು ಬ್ರಾಹ್ಮಣ ಎಂದು ಕರೆಯಬಹುದು. ಪ್ರಪಂಚದಲ್ಲಿ ಯಾವ ವಿದ್ಯೆಯನ್ನು ಕಲಿತರೇ ಅವನ ಕುಲದೊಂದಿಗಾಗಲಿ, ಅವನ ಮತದೊಂದಿಗೆ ಸಂಬಂಧವಾಗಲಿ ಇಲ್ಲದೇ ಅವನಿಗೆ ಆ ವಿದ್ಯೆಗೆ ಸಂಬಂಧಿಸಿದ ಹೆಸರನ್ನು ಇಡುತ್ತಿದ್ದೇವೆ. ಉದಾಹರಣೆಗೆ ಗಾಡಿಯನ್ನು ನಡೆಸುವವನು ಹಿಂದೂಗಳಲ್ಲಿ ಯಾವ ಕುಲದವನಾದರೂ ಅವನನ್ನು ಡ್ರೈವರ್ ಎಂದೇ ಕರೆಯುತ್ತೇವೆ. ಕುಲವನ್ನನುಸರಿಸಿ ಇವನು ಬಲಿಜ ಡ್ರೈವರ್, ಇವನು ರೆಡ್ಡಿ ಡ್ರೈವರ್, ಇವನು ಚೌದರಿ ಡ್ರೈವರ್ ಎಂದು ಹೇಗೆ ಅನ್ನುವುದಿಲ್ಲವೊ, ಹಾಗೆಯೇ ಇತರೆ ಮತದವರಾದ ಮುಸ್ಲಿಮ್‌ರನ್ನಾದರೂ, ಕ್ರೈಸ್ಥರನ್ನಾಗಲಿ ಮತಗಳಿಗೆ ಅತೀತವಾಗಿ ಆತನನ್ನು ಡ್ರೈವರ್ ಅನ್ನುತ್ತೇವೆ ಆದರೆ, ಮುಸ್ಲಿಮ್ ಡ್ರೈವರ್ ಎಂದಾಗಲಿ, ಕ್ರೈಸ್ಥವ ಡ್ರೈವರ್ ಎಂದಾಗಲಿ ಅನ್ನುವುದಿಲ್ಲ. ಹಾಗೆಯೇ ಬ್ರಹ್ಮವಿದ್ಯೆಯನ್ನು ಕಲಿತವನು ಯಾವ ಮತಸ್ಥನಾದರೂ, ಯಾವ ಕುಲಸ್ಥನಾದರೂ ಅವನ ಕುಲಮತಕ್ಕೆ ಅತೀತವಾಗಿ ಅವನನ್ನು **'ಬ್ರಾಹ್ಮಣ'** ಎಂದು ಕರೆಯುತ್ತೇವೆ.

ಡ್ರೈವರ್ ವಿದ್ಯೆಯನ್ನು ಕಲಿತಿರುವುದನ್ನು ಅನುಸರಿಸಿ ಅವನನ್ನು ಡ್ರೈವರ್ ಎನ್ನುವಂತೆ, ಬ್ರಹ್ಮವಿದ್ಯೆಯನ್ನು ಕಲಿತವನನ್ನು 'ಬ್ರಾಹ್ಮಣ' ಎನ್ನಬೇಕು. ಹೇಗಾದರೆ ಡ್ರೈವರ್‌ಗಳದು ಡ್ರೈವರ್‌ಕುಲ ಅಲ್ಲವೊ, ಹಾಗೇ ಬ್ರಾಹ್ಮಣರದ್ದು ಬ್ರಾಹ್ಮಣಕುಲ ಅಲ್ಲ. ಡ್ರೈವರ್ ಎನ್ನುವುದು ಕಲಿತ ವಿದ್ಯೆಯನ್ನು ಅನುಸರಿಸಿ ಮಾಡುವ ವೃತ್ತಿ. ಹಾಗೆಯೇ ಬ್ರಾಹ್ಮಣ ಎನ್ನುವುದು ಕಲಿತ ವಿದ್ಯೆಯನ್ನು ಅನುಸರಿಸಿ ಮಾಡುವ ಸಾಧಕನಾಗಿರುತ್ತಾನೆ. ಅಷ್ಟೇ ಹೊರತು ಬ್ರಾಹ್ಮಣ ಎನ್ನುವುದು ಪ್ರತ್ಯೇಕವಾದ ಕುಲ ಅಲ್ಲ. ಆದರೇ ಈ ದಿನ ಭೂಮಿಮೇಲೆ ಬ್ರಾಹ್ಮಣರು ಎನ್ನುವ ಕುಲದ ಹೆಸರಿನಿಂದ ಬಹಳಜನ ಇದ್ದಾರೆ ಅಲ್ಲವೇ! ಅವರದ್ದು ಕುಲ ಅಲ್ಲವಾ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನನ್ನ ಉತ್ತರ ಏನೆಂದರೇ!

ಈ ದಿನ ಒಂದು ಬಸ್ ಡಿಪೋದಲ್ಲಿ 500 ಜನ ಕೆಲಸ ಮಾಡುತ್ತಿದ್ದಾರೆ. ಎಲ್ಲರೂ ಖಾಕಿ ಡ್ರಸ್‌ನಿಂದ ಅವರ ವೃತ್ತಿ ಮಾಡುತ್ತಿದ್ದಾರೆ. ಹಾಗೆಂದು ಡ್ರೈವರ್‌ಗಳೆಲ್ಲರನ್ನು ಒಂದೇಕುಲದವರೆಂದು ಹೇಗೆ ಹೇಳಲಾರೆವೊ ಹಾಗೆಯೇ

ಬ್ರಾಹ್ಮಣರೆಲ್ಲರನ್ನು ಒಂದೇ ಕುಲದವರೆಂದು ಹೇಳಲಾರೆವು. ಬಸ್ ಡ್ರೈವರ್‌ಗಳಿಗೆ ಡ್ರಸ್‌ಕೋಡ್ ಇರುವಂತೆ ಬ್ರಾಹ್ಮಣರಿಗು ಕೂಡಾ ಅವರು ಮಾಡುವ ವೃತ್ತಿಯನ್ನು ಅನುಸರಿಸಿ ಡ್ರಸ್‌ಕೋಡ್ ಇದೆ. ಡ್ರೈವರ್‌ಗಳಿಗೆ ಡ್ರಸ್‌ಕೋಡ್ ಇದೆ. ಬ್ರಾಹ್ಮಣರಿಗೆ ಡ್ರಸ್‌ಕೋಡ್ ಇದೆ. ಡ್ರೈವರ್‌ಗಳಿಗೆ ಡ್ರೈವರ್ ವೃತ್ತಿಯಾದರೆ, ಬ್ರಾಹ್ಮಣರಿಗೆ ಬ್ರಾಹ್ಮಣ ವೃತ್ತಿ ಇದೆ. ಡ್ರೈವರ್‌ಗಳು ಒಂದೇ ಕುಲದವರು ಅಲ್ಲ, ಬ್ರಾಹ್ಮಣರು ಒಂದೇ ಕುಲದವರು ಅಲ್ಲವೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ನಮ್ಮ ಊರಿನಲ್ಲಿ 'ಪಿಂಜಾರ' ಕುಲದವರು ಬಹಳಜನ ಇದ್ದಾರೆ. ಪೂರ್ವದಿಂದ ಅವರ ವೃತ್ತಿ ಹತ್ತಿಯ ಹಾಸಿಗೆಗಳನ್ನು ಹೊಲಿಯುವುದು. ಆದರೇ ಈಗಿನ ಕಾಲದಲ್ಲಿ ರೆಡಿಮೇಡ್ ಹಾಸಿಗೆಗಳು, ಸ್ಪಾಂಜೀ ಹಾಸಿಗೆಗಳು ತಯಾರಾಗುವುದರಿಂದ ದೂದೇಕುಲ (ಪಿಂಜಾರ) ಕುಲದವರಿಗೆ ಹಾಸಿಗೆ ಹೊಲಿಯುವ ಕೆಲಸ ಇಲ್ಲದೇ ಹೋಗಿದೆ. ಆಗ ಅವರು ಒಬ್ಬೊಬ್ಬರು ಡ್ರೈವರ್ ಕೆಲಸವನ್ನು ಕಲಿತುಕೊಳ್ಳುತ್ತಾ, ಕೆಲವು ದಿನಗಳಿಗೆ ಅವರೆಲ್ಲರೂ ಡ್ರೈವರ್‌ಗಳಾಗಿ ಬದಲಾಗಿ ಹೋಗಿದ್ದಾರೆ. ಈದಿನ ಎಲ್ಲರೂ ಬಸ್ ಡ್ರೈವರ್‌ಗಳಾಗಿ ಕೆಲಸ ಮಾಡುತ್ತಿದ್ದಾರೆ. ಆದರೂ ಅವರು ಪೂರ್ವದಲ್ಲಿರುವ ವೃತ್ತಿಯನ್ನು, ಕುಲವನ್ನು ಮರೆತುಹೋಗಲಿಲ್ಲ. ಅವರನ್ನು "ನಿಮ್ಮದು ಯಾವ ಕುಲ?" ಎಂದು ಕೇಳಿದರೆ "ನಮ್ಮದು ದೂದೇಕುಲ (ಪಿಂಜಾರ)" ಕುಲ ಎಂದು ಹೇಳುತ್ತಿದ್ದಾರೆ ಹೊರತು, "ನಮ್ಮದು ಡ್ರೈವರ್ ಕುಲ" ಎಂದು ಹೇಳುವುದಿಲ್ಲ. ಅವರು ತಮ್ಮ ಕುಲವನ್ನು ಯಾವುದೇ ನಾಚಿಕೆಪಡದೆ ಧೈರ್ಯವಾಗಿ ಹೇಳುತ್ತಿದ್ದಾರೆ. ವಿವಾಹಗಳನ್ನು ಕೂಡಾ ಅವರ ಕುಲಗಳಲ್ಲಿಯೇ ಮಾಡಿಕೊಳ್ಳುತ್ತಿದ್ದಾರೆ. ನಾವು ಡ್ರೈವರ್‌ಗಳು ಅಲ್ಲವೆ! ಎಂದು ಬೇರೆ ಕುಲದ ಡ್ರೈವರ್‌ಗಳ ಮನೆಯಲ್ಲಿ ಮದುವೆ ಮಾಡಿಕೊಳ್ಳಲಿಲ್ಲ. ಎಷ್ಟೇ ಡ್ರೈವರ್‌ಗಳಾದರೂ ಅವರ ಕುಲದ ಮೇಲೆ ಅವರಿಗೆ ಅಭಿಮಾನವಿದೆ. ಅವರ ಕುಲದ ಹೆಸರೇ ಹೇಳುತ್ತಿದ್ದಾರೆ. ಆದರೇ ಇಂದಿನ ಬ್ರಾಹ್ಮಣರು ತಮ್ಮ ಪೂರ್ವದ ವೃತ್ತಿಯನ್ನು, ಪೂರ್ವದ ಕುಲವನ್ನು ಹೇಳದಂತೆ ಪ್ರಸ್ತುತ ಮಾಡುವ ಬ್ರಾಹ್ಮಣ ವೃತ್ತಿ ಹೆಸರು ಹೇಳುತ್ತಿದ್ದಾರೆ. ನಾವು ಬ್ರಾಹ್ಮಣರು ಎನ್ನುತ್ತಿದ್ದಾರೆ. ನಿಜವಾಗಲೂ ಅವರದ್ದು ಬ್ರಾಹ್ಮಣ**

**ಕುಲವೇ ಅಲ್ಲವಲ್ಲ! ಅವರು ಯಾವ ಕುಲದವರಾಗಿ ಇರಬಹುದು? ತಮ್ಮ ಪೂರ್ವದ ಕುಲವನ್ನು ಬಿಟ್ಟು ತಮ್ಮದಲ್ಲದ ಕುಲದ ಹೆಸರು ಏಕೆ ಹೇಳುತ್ತಿದ್ದಾರೆ? ಪೂರ್ವದಲ್ಲಿ ಅವರಿಗೆ ಕುಲ ಇಲ್ಲವಾ?**

**ಉತ್ತರ :–** ನಿನ್ನದು ಒಳ್ಳೆಯ ಪ್ರಶ್ನೆ! ಇಲ್ಲಿಯವರೆಗು ಹೇಳಿರುವುದನ್ನು ಅನುಸರಿಸಿ ನೀನೇ ಉತ್ತರವನ್ನು ತಿಳಿದುಕೊಳ್ಳಬಹುದು. ಹೊಸದಾಗಿ ಕೇಳಬೇಕಾದ ಕೆಲಸವಿಲ್ಲ. ಆದರೂ ನೀನು ಕೇಳಿದ್ದೀಯಾ. ನಾನು ಹೇಳುವ ವಿಷಯವನ್ನು ಜಾಗ್ರತೆಯಾಗಿ ಕೇಳಿ ಗ್ರಹಿಸಿಕೊಳ್ಳಬೇಕು. ನೀನು ಪ್ರಶ್ನೆಯಲ್ಲಿ ದೂದೇಕುಲ ಕುಲದವರು ಒಂದೇಸಲ ಅವರು ಎಲ್ಲರೂ ಡ್ರೈವರ್‌ವೃತ್ತಿ ಕಲಿತುಕೊಂಡಂತೆ, ಈ ದಿನ ಅನೇಕ ಕುಲದವರು ಡ್ರೈವರ್‌ಗಳಾಗಿ ಬದಲಾಗುತ್ತಿದ್ದಾರೆ. ಹಾಗೇ ಈ ದಿನ ಯಾವ ಕುಲದವನಾದರೂ ಬ್ರಹ್ಮವಿದ್ಯೆಯನ್ನು ಕಲಿತರೇ ಬ್ರಾಹ್ಮಣನು ಆಗುತ್ತಾನೆ. ಡ್ರೈವರ್ ಆಗುವುದಕ್ಕೆ ಇಂತಹ ಕುಲದವರೇ ಅರ್ಹರು ಎಂದು ಹೇಳದ ಹಾಗೆ, ಬ್ರಾಹ್ಮಣರಾಗಿ ಬದಲಾಗುವುದಕ್ಕೆ ಕೂಡಾ ಇಂತಹ ಕುಲದವರೇ ಯೋಗ್ಯರು ಎಂದು ಹೇಳಲಾರೆವು. ಆದರೇ ಪೂರ್ವದಲ್ಲಿ ದೂದೇಕುಲ ಕುಲದವರು ಎಲ್ಲರೂ ಡ್ರೈವರ್‌ಗಳಾಗಿ ಬದಲಾದಂತೆ, ಈಗಲೂ ಕೂಡಾ ಒಂದೇ ಕುಲದವರಾದರೂ, ಇತರೆ ಕುಲದವರಾದರೂ ಯಾರಾದರೂ ಬ್ರಾಹ್ಮಣರಾಗಿ ಬದಲಾಗಬಹುದು. ಬ್ರಾಹ್ಮಣರಾಗಿ ಬದಲಾಗುವುದಕ್ಕೆ ಕುಲ ನಿಯಮ ಎನ್ನುವುದು ಯಾವುದು ಇಲ್ಲ. ಈ ದಿನ ಯಾವ ಕುಲದವರಾದರೂ ಡ್ರೈವರ್ ಆದಂತೆ, ಯಾವ ಕುಲದವನಾದರೂ ಬ್ರಾಹ್ಮಣನಾಗಿ ಬದಲಾಗಬಹುದು. ಆದರೇ ಪೂರ್ವದಲ್ಲಿ ಒಂದು ಊರಿನಲ್ಲಿನ ಪಿಂಜಾರ ಕುಲದವರು ಎಲ್ಲರೂ ಡ್ರೈವರ್‌ಗಳಾಗಿ ಬದಲಾದಂತೆ ಬ್ರಾಹ್ಮಣರು ಕೂಡಾ ಒಂದೇ ಊರಿನಲ್ಲಿನ ಒಂದೇ ಕುಲ ದವರೆಲ್ಲರೂ ತಮ್ಮ ಉಪಾಧಿಯನ್ನು ಕಳೆದುಕೊಂಡು ಎಲ್ಲರೂ ಬ್ರಾಹ್ಮಣರಾಗಿ ಬದಲಾಗಿಹೋಗಿದ್ದಾರೆ. ನಂತರ ಪೂರ್ವದ ತಮ್ಮ ಕುಲವನ್ನು ಅವರು ಹೇಳದೆ ಮಾಡುವ ಕೆಲಸವನ್ನೇ ಕುಲವಾಗಿ ಬ್ರಾಹ್ಮಣರಾಗಿ ಹೇಳಿಕೊಳ್ಳುತ್ತಿದ್ದಾರೆ. ಅವರ ಪೂರ್ವದ ವಿಷಯವನ್ನು ಈದಿನ ಅವರು ಪೂರ್ತಿಯಾಗಿ ಮರೆತುಹೋಗಿ

ಕೊನೆಗೆ ಬ್ರಾಹ್ಮಣಕುಲವೇ ತಮ್ಮ ಕುಲವೆಂದು ಈದಿನ ದೃಢ ವಿಶ್ವಾಸದಿಂದ ಇದ್ದಾರೆ. ಅವರದ್ದು ಪೂರ್ವದಲ್ಲಿ ಬ್ರಾಹ್ಮಣಕುಲ ಅಲ್ಲವೆಂದು, ತಮ್ಮ ಚರಿತ್ರೆಬೇರೆಯೆಂದು, ಈ ದಿನ ಇರುವವರಿಗೆ ಯಾವುದು ತಿಳಿದಿಲ್ಲ. ಈ ದಿನ ಬ್ರಾಹ್ಮಣರು ಎಂದು ಹೇಳಿಕೊಳ್ಳುವವರ ಚರಿತ್ರೆ ಅವರಿಗೆ ತಿಳಿಯದಿದ್ದರೂ, ನನಗೆ ಸ್ವಲ್ಪ ತಿಳಿದಿದೆ ಅದನ್ನೇ ಹೇಳುತ್ತಿದ್ದೇನೆ ಕೇಳಿರಿ.

**ಪ್ರಶ್ನೆ :– ಬ್ರಾಹ್ಮಣರೆಂದು ಹೇಳಿಕೊಳ್ಳುವ ಅವರ ಚರಿತ್ರೆ ಅವರಿಗೇ ತಿಳಿಯದಿರುವುದು ನಿನಗೆ ಹೇಗೆ ತಿಳಿದಿದೆ? ನೀನು ಹೇಗೆ ಹೇಳುತ್ತೀಯಾ?**

**ಉತ್ತರ :–** ಎಷ್ಟೋ ಸಾವಿರಾರು, ಲಕ್ಷಗಳ ವರ್ಷಗಳು ಕಳೆದುಹೋಗಿರುವುದನ್ನು ಚರಿತ್ರೆಯೆಂದು ಹೇಳುತ್ತಾರೆ. ಚರಿತ್ರೆ ಆಯುಷ್ಷು ಬಹಳ ದೊಡ್ಡದು. ಮನುಷ್ಯನ ಆಯಷ್ಷು ಬಹಳ ಚಿಕ್ಕದು. ಪ್ರಸ್ತುತ ಕಳೆಯುವ ಜೀವನದಲ್ಲಿನದೇ ಮನುಷ್ಯನಿಗೆ ಸರಿಯಾಗಿ ಜ್ಞಾಪಕವಿರುವುದಿಲ್ಲ. ಒಂದು ವೇಳೆ ಜ್ಞಾಪಕವಿದ್ದರೂ ಪ್ರಸ್ತುತ ಜನ್ಮದಲ್ಲಿ ನಡೆದಿರುವುದೇ ಜ್ಞಾಪಕವಿರುತ್ತದೆ. ಮನುಷ್ಯ ಈಗಿನ ಕಾಲದಲ್ಲಿ 70, 80 ಅಥವಾ 90 ವರ್ಷಗಳಿಗಿಂತ ಹೆಚ್ಚಿನ ಕಾಲ ಬದುಕುತ್ತಿಲ್ಲ. ಯಾರೋ ಒಬ್ಬನು ನೂರು ವರ್ಷಗಳು ಬದುಕಿದರೂ ಆ ನೂರು ವರ್ಷಗಳ ವಿಷಯಗಳೇ ಅವನಿಗೆ ತಿಳಿದಿರುತ್ತದೆ. ಆ ನೂರು ವರ್ಷಗಳ ಸಮಾಚಾರವೇ ಅವನಿಗೆ ಜ್ಞಾಪಕವಿರಬಹುದು. ಅದಕ್ಕಿಂತ ಹಿಂದಿನ ಕಾಲದಲ್ಲಿನದ್ದು ಜ್ಞಾಪಕ ಇರುವುದಕ್ಕೆ ಅವಕಾಶವಿಲ್ಲ. ನೂರು ವರ್ಷಗಳ ಪೂರ್ವದಲ್ಲಿನದೇ ಯಾವುದು ತಿಳಿಯದಿರು ವಾಗ ಸಾವಿರ, ಲಕ್ಷಗಳ ವರ್ಷಗಳ ಪೂರ್ವದಲ್ಲಿ ಏನು ನಡೆದಿದೆಯೋ ಹೇಗೆ ತಿಳಿಯುತ್ತದೆ? ಹಿಂದೆ ಕಳೆದ ಕಾಲದಲ್ಲಿ ನಡೆದಿರುವುದನ್ನು ಚರಿತ್ರೆಯೆಂದು ಕರೆಯುತ್ತೇವೆ. ಪ್ರಸ್ತುತ ಕಾಲದಲ್ಲಿ ಒಬ್ಬ ಮನುಷ್ಯ ತನ್ನ ಮುಂದೆ ನಡೆದ ಚರಿತ್ರೆಯನ್ನು ಮಾತ್ರ ತಿಳಿಯಬಲ್ಲನು ಆದರೆ, ಅದಕ್ಕು ಮುನ್ನ ಕಳೆದ ಚರಿತ್ರೆಯನ್ನು ಹೇಳಲಾರನು. ಪ್ರಸ್ತುತ ಜನ್ಮಕ್ಕಿಂತ ಮೊದಲು ಎಷ್ಟೋ ಜನ್ಮಗಳು ಕಳೆದು ಹೋದರೂ, ಎಷ್ಟೋ ಲಕ್ಷಗಳ ವರ್ಷಗಳಿಂದ ಮನುಷ್ಯನಿದ್ದರೂ, ಅವನ ಜೀವನ ಜನ್ಮಗಳಿಂದ ಬೆಸೆದುಕೊಂಡಿರುವುದರಿಂದ, ಒಂದೊಂದು ಜನ್ಮದಲ್ಲಿ

ನೂರು ವರ್ಷಗಳಿಗಿಂತ ಹೆಚ್ಚು ಇಲ್ಲದಿರುವುದರಿಂದ, ಪ್ರತಿ ಜನ್ಮಕ್ಕು ಹೊಸ ಮನಸ್ಸು, ಹೊಸ ಶರೀರ ಬರುವುದರಿಂದ, ಜ್ಞಾಪಕಗಳಿರುವ ಮನಸ್ಸು ಒಂದೇ ಜನ್ಮದಲ್ಲಿದ್ದು ಎರಡನೆ ಜನ್ಮಕ್ಕೇ ಬರದಿರುವುದರಿಂದ, ಯಾವ ಜನ್ಮ ಜ್ಞಾಪಕ ಆ ಜನ್ಮಕ್ಕೆ ಇರುತ್ತದೆ. ಆದ್ದರಿಂದ ಪ್ರಸ್ತುತ ಜನ್ಮ ಜ್ಞಾಪಕ ಹೊರತು ಗತದಲ್ಲಿ ಏನು ನಡೆದಿರುವುದು ಯಾರಿಗೂ ತಿಳಿದಿಲ್ಲ. ಮನುಷ್ಯ ಪ್ರಸ್ತುತ ಜನ್ಮದಲ್ಲಿನ ವಿಷಯಗಳನ್ನೇ ಸರಿಯಾಗಿ ಜ್ಞಾಪಕ ಇಟ್ಟುಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಹಣದ ವಿಷಯವಾದರೆ ಎಲ್ಲಾ ಜ್ಞಾಪಕಗಳಿರುತ್ತವೆ. ಉಳಿದ ವಿಷಯಗಳ ಮೇಲೆ ಶ್ರದ್ಧೆ ಇಲ್ಲದಿರುವುದರಿಂದ ಅವು ಸರಿಯಾಗಿ ಜ್ಞಾಪಕ ಇರುವುದಿಲ್ಲ. ಮನುಷ್ಯರಾದವರೆಲ್ಲರಲ್ಲಿಯೂ ಇದೇ ವಿಧಾನ ಇದೆ.

ಮನುಷ್ಯ ಸ್ವತಃವಾಗಿ ಗತ ಚರಿತ್ರೆಯನ್ನು ತಿಳಿಯಲಾರನು. ಆದರೇ ಗತ ಚರಿತ್ರೆಯಲ್ಲಿ ಯಾವುದು ಅಗತ್ಯವಿದ್ದರೆ ಅದನ್ನೇ ತಿಳಿಯುವುದಕ್ಕು ಕೂಡಾ ಒಂದು ಅವಕಾಶವಿದೆ. ಅದು ಹೇಗೆ ಎಂದರೇ! ಯಾರಾದರೆ ಆತ್ಮಜ್ಞಾನವನ್ನು ತಿಳಿಯಲ್ಪಟ್ಟು, ಅದರಿಂದ ಆತ್ಮವನ್ನು ತಿಳಿಯುತ್ತಾನೊ, ಅವನು ಆತ್ಮದೊಂದಿಗೆ ಪರಿಚಯ ಇರುವವನಾಗಿ ಹೋಗುತ್ತಾನೆ. ಅಂತಹವನು ಸ್ವಾರ್ಥ ವಿಷಯ ಅಲ್ಲದಿರುವುದು ಏನಾದರೂ ಜ್ಞಾನ ಸಂಬಂಧಿತ ವಿಷಯವನ್ನು ತಿಳಿಯಬೇಕೆನ್ನುವ ಕೋರಿಕೆಯಿಂದ ಗತದಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ವಿಷಯವನ್ನು ತಿಳಿಯ ಕೋರಿದರೆ ಆಗ ಆತ್ಮ ಆ ವಿಷಯಕ್ಕೆ ಸಂಬಂಧಿಸಿದ ಜ್ಞಾಪಕವನ್ನು ಜೀವಿಗೆ ಉಂಟುಮಾಡುತ್ತಾನೆ. ಹಾಗೆ ಆತ್ಮ ನೀಡಿದ ಜ್ಞಾಪಕದಿಂದ ಹಿಂದಿನ ಚರಿತ್ರೆಯನ್ನು ಮನುಷ್ಯ ತಿಳಿಯುವ ಅವಕಾಶವಿದೆ. ಈಗ ನಾನು ಗತ ಚರಿತ್ರೆಯಲ್ಲಿ ಬ್ರಾಹ್ಮಣರು ಯಾವಯಾವ ಕುಲಗಳಿಂದ ಬಂದಿದ್ದಾರೊ ತಿಳಿಯಲು ಕೋರಿದ್ದೇನೆ. ನನ್ನ ಕೋರಿಕೆಯನ್ನು ತಿಳಿದ ನನ್ನ ಆತ್ಮ ಗತದಲ್ಲಿ ಸೃಷ್ಟ್ಯಾದಿಯಿಂದ ಇರುವುದರಿಂದ ಎಲ್ಲಾ ವಿಷಯಗಳು ತಿಳಿದವನಾಗಿದ್ದಾನೆ. ಆದ್ದರಿಂದ ನನ್ನ ಕೋರಿಕೆಯನ್ನು ಮನ್ನಿಸಿ ನನಗೆ ಬ್ರಾಹ್ಮಣರಾಗಿ ಬದಲಾದವರು ಗತದಲ್ಲಿ ಯಾವಯಾವ ಕುಲಗಳಿಂದ ಬಂದಿದ್ದಾರೊ, ಅವರ ಚರಿತ್ರೆಯನ್ನು ತಿಳಿಸಿದ್ದಾನೆ. ಮನಸ್ಸು

ಜ್ಞಾಪಕದಿಂದ ಪ್ರಸ್ತುತ ಜನ್ಮದಲ್ಲಿನ ವಿಷಯವೇ ತಿಳಿಯುತ್ತದೆ. ಆತ್ಮ ಎಂದಿಗೂ ಬದಲಾಗದಿರುವುದು ಆಗಿರುವುದರಿಂದ ಚರಿತ್ರೆ ವಿಷಯಗಳೆಲ್ಲವೂ ತಿಳಿದಿರುತ್ತದೆ.

ಶರೀರದಲ್ಲಿ ಆತ್ಮ ಒಂದೇ ಅಲ್ಲದೆ ಜೀವಿಯು ಕೂಡಾ ಆಗಲೂ ಈಗಲೂ ಇದ್ದರೂ ಜೀವಿಗೆ ಸ್ವತಃವಾಗಿ ಜ್ಞಾಪಕ ಎನ್ನುವ ಶಕ್ತಿ ಇಲ್ಲದಿರುವುದರಿಂದ ಜೀವಿಗೆ ಏನು ತಿಳಿದಿಲ್ಲವೆಂದೇ ಹೇಳಬಹುದು. ಆತ್ಮಗೆ ಎಲ್ಲಾ ಜ್ಞಾಪಕಗಳು ಇರುವುದರಿಂದ ತನಗೆ ಇಷ್ಟವಾದರೆ ಯಾವ ವಿಷಯವನ್ನಾದರೂ ತಿಳಿಸಬಲ್ಲನು. ನಾನು ಆತ್ಮಗೆ ಇಷ್ಟವಾದವನು ಆದ್ದರಿಂದ ನನ್ನ ಕೋರಿಕೆಯನ್ನು ನೆರವೇರಿಸುತ್ತಾ ಕೆಲವು ಲಕ್ಷಗಳ ವರ್ಷಗಳ ಪೂರ್ವದಲ್ಲಿ ನಡೆದ ಚರಿತ್ರೆ ತಿಳಿಸಿದ್ದಾನೆ. ಈಗ ನಾನು ಹೇಳುವ ಚರಿತ್ರೆ ಸುಮಾರು ಹತ್ತು ಲಕ್ಷಗಳ ವರ್ಷಗಳ ಕೆಳಗಿನದೆಂದು ತಿಳಿಯುತ್ತಿದ್ದೇನೆ. ಆಗ ನಡೆದಿರುವುದೆಂದು ನಾನು ಕಲ್ಪಿಸಿ ಹೇಳುವುದು ಅಲ್ಲ. ಆತ್ಮ ತಿಳಿಸಬೇಕೆಂದುಕೊಂಡು ತಿಳಿಸಿರುವುದೆ ಹೊರತು ಬೇರೆ ವಿಷಯವಲ್ಲ. ಯಾವ ವಿಷಯವನ್ನು ಯಾರು ಕೋರಿದರೂ ಅವರು ಆತ್ಮಗೆ ಇಷ್ಟವಾದರಾಗಿದ್ದರೆ ಆ ವಿಷಯವನ್ನು ಆತ್ಮ ತಿಳಿಸುತ್ತದೆ. ಆಯಿಷ್ಟರಾದರೆ ಸ್ವಲ್ಪವಾದರೂ ತಿಳಿಸುವುದಿಲ್ಲ. ನನಗೆ ಆತ್ಮ ತಿಳಿಸಿದ ವಿಷಯದಿಂದ ಬ್ರಾಹ್ಮಣನು ಎನ್ನುವುದು ಕುಲದ ಹೆಸರಲ್ಲ, ಅದು ವೃತ್ತಿ ಹೆಸರು ಎಂದು ತಿಳಿದಿದೆ. ಕಲಿತಿರುವ ವಿದ್ಯೆಯನ್ನು ಅನುಸರಿಸಿ ಬ್ರಾಹ್ಮಣನು ಆದರೇ ಆತನ ಕುಲ ಬೇರೆ ಇರುತ್ತದೆ. ಆ ಚರಿತ್ರೆಯನ್ನು ಬಿಚ್ಚಿ ತಿಳಿದುಕೊಂಡರೆ ಆತ್ಮ ಹೀಗೆ ತಿಳಿಸುತ್ತಿದೆ.

ಸೃಷ್ಠಿ ನಡೆದು ಮನುಷ್ಯರು ತಯಾರಾದ ನಂತರ ಮನುಷ್ಯರು ಸ್ವಚ್ಛವಾದವರಾಗಿ ಇರುತ್ತಿದ್ದರು. ಅವರಲ್ಲಿ ಯಾವ ಕುಲಮತ ಕಲುಷಿತಗಳು ಇಲ್ಲ. ಅಂತಹ ಸಮಯದಲ್ಲಿ ಸೂರ್ಯನು ಭೂಮಿಮೇಲೆ ಮನುವಿಗೆ ಜ್ಞಾನವನ್ನು ತಿಳಿಸಿದ ನಂತರ ಸ್ವಲ್ಪಕಾಲ ಎಲ್ಲರಿಗೂ ಜ್ಞಾನ ತಿಳಿಯಲಿಲ್ಲ. ಮೊದಲು ಮನುವಿಗೆ ತಿಳಿದ ಜ್ಞಾನವನ್ನು ಆತನು ಇಕ್ಷ್ವಾಕನು ಎನ್ನುವ ರಾಜನಿಗೆ ತಿಳಿಸಿದ್ದಾನೆಂದು, ಆತನ ಮೂಲಕ ಇನ್ನೊಬ್ಬರಿಗೆ ಹಾಗೇ ಒಬ್ಬರಿಂದ ಒಬ್ಬರಿಗೆ ಹರಡಿ, ಕೆಲವು ಸಾವಿರ ವರ್ಷಗಳಿಗೆ ಪೂರ್ತಿಯಾಗಿ ಪ್ರಜೆಗಳೆಲ್ಲರಿಗೂ

ತಿಳಿದಿದೆಯೆಂದು, ನಂತರ ಕಾಲ ಕಳೆದಾಗ ಕಾಲಕ್ರಮವಾಗಿ ಜ್ಞಾಪಕ ಇಲ್ಲದಂತೆ ಹೋಗುತ್ತಾ ಬಂದಿದೆಯೆಂದು, ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದಾಗ ಕೇಳಿದ್ದೇವೆ. ಗ್ರಂಥದ ಮೂಲಕ ತಿಳಿದುಕೊಂಡಿದ್ದೇವೆ. ಮೊದಲು ಮನುವು ಎನ್ನುವ ವ್ಯಕ್ತಿ ತನಗೆ ಸೂರ್ಯನ ಮೂಲಕ ತಿಳಿದ ಜ್ಞಾನವನ್ನು ಮೊದಲು ರಾಜನಿಗೆ ತಿಳಿಸುವುದಕ್ಕೆ ಕಾರಣವಿದೆ. ರಾಜನಿಗೆ ಹೇಳಿದರೆ ರಾಜನ ಮುಖಾಂತರ ಪ್ರಜೆಗಳೆಲ್ಲರಿಗೂ ಸೇರಿಹೋಗುತ್ತದೆನ್ನುವ ಒಳ್ಳೆಯ ಉದ್ದೇಶದಿಂದ ಆಗ ಪಾಲಿಸುವ ರಾಜನಿಗೆ ತಿಳಿಸಬೇಕೆಂದುಕೊಂಡಿದ್ದಾನೆ. ಮನುವು ಒಂದು ಕುಗ್ರಾಮ ಪ್ರಾಂತದಲ್ಲಿರುವ ವ್ಯಕ್ತಿ ಆಗಿರುವುದರಿಂದ ರಾಜನ ಹತ್ತಿರಕ್ಕೆ ನೇರವಾಗಿ ಹೋಗುವ ಸಾಮರ್ಥ್ಯವಾಗಲಿ, ಘನತೆಯಾಗಲಿ ಇಲ್ಲದವನು. ಆದ್ದರಿಂದ ರಾಜರ ಸಭೆಯಲ್ಲಿ ಕೆಲಸ ಮಾಡುವವರನ್ನು ಹುಡುಕಿ ಅವರ ಮೂಲಕ ರಾಜನಿಗೆ ಜ್ಞಾನವನ್ನು ತಿಳಿಸಬೇಕೆಂದು ಅಂದುಕೊಂಡಿದ್ದಾನೆ. ಆಗ ರಾಜನಿಗೆ ಸಲಹೆದಾರನಾಗಿರುವ ಆಸ್ಥಾನ ವಿದ್ವಾಂಸನಾದ ವ್ಯಕ್ತಿಯನ್ನು ಪರಿಚಯ ಮಾಡಿಕೊಂಡಿದ್ದಾನೆ. ರಾಜನಿಗು, ಮಂತ್ರಿಗು ಬಹಳ ಬುದ್ಧಿವಂತಿಕೆಯಿಂದ ಸಲಹೆ ಹೇಳುವ ಸ್ಥಾನದಲ್ಲಿರುವ ವ್ಯಕ್ತಿಗಳಿಗೆ ರಾಜರ ಬಳಿ ಒಳ್ಳೆಯ ಘನತೆ, ಗೌರವ ಇದ್ದವು.

ಆ ಕಾಲದಲ್ಲಿ ದೈವಜ್ಞಾನ, ದೇವರು ಎನ್ನುವ ವಿಷಯ ತಿಳಿಯದಿದ್ದರೂ ಸ್ವಲ್ಪ ಭಕ್ತಿ ಹೊಂದಿರುತ್ತಿದ್ದರು. ಅವರ ಭಕ್ತಿ ಪ್ರಕೃತಿ ಮೇಲೆ ಹೆಚ್ಚಾಗಿ ಇರುತ್ತಿತ್ತು. ಸೂರ್ಯನಿಂದ ತಮ್ಮ ಜೀವನ ಸುಖವಾಗಿ ಸಾಗುತ್ತಿದೆಯೆಂದು, ಚಂದ್ರನಿಂದ ಮಳೆಗಳು ಬರುತ್ತಿವೆಯೆಂದು, ಭೂಮಿಯಿಂದ ಬೆಳೆಗಳು ಬೆಳೆಯುತ್ತಿವೆಯೆಂದು ಸೂರ್ಯನನ್ನು, ಚಂದ್ರನನ್ನು, ಭೂಮಿಯನ್ನು ಆರಾಧಿಸುತ್ತಿದ್ದರು. ಹಾವುಗಳ ಬಾಧೆಗಳಿಂದ ಮರಣಿಸದಂತೆ ಹಾವುಗಳನ್ನು, ಚೇಳುಗಳನ್ನು ಪೂಜಿಸುತ್ತಿದ್ದರು. ಒಟ್ಟಾರೆ ಸ್ವಲ್ಪ ಬುದ್ಧಿಯನ್ನು ಉಪಯೋಗಿಸಿ ಆದಿನ ಭಕ್ತಿ ಭಾವವನ್ನು ಹೊಂದಿರುತ್ತಿದ್ದರು. ರಾಜನಿಗೆ ಸಲಹೆಗಳು ಕೊಡುವ ಮನುಷ್ಯರು ತಿಳುವಳಿಕೆ ಯುಳ್ಳವರು, ವಿದ್ಯಾವಂತರು ಆಗಿರುವುದರಿಂದ ಅವರೇ ಪ್ರಜೆಗಳಲ್ಲಿ ಭಕ್ತಿ ಭಾವವನ್ನು ಕೂಡಾ ಕಲ್ಪಿಸಿದ್ದಾರೆ. ಅಂತಹ ಪಂಡಿತನು ಮನುವಿಗೆ ಪರಿಚಯವಾದ

ನಂತರ ಮನುವು ಪ್ರತಿದಿನ ಒಂದು ಅರ್ಧಗಂಟೆ ಸಮಯ ಜ್ಞಾನವನ್ನು ವಿವರಿಸಿ ರಾಜನ ಸಲಹೆದಾರನಿಗೆ ಹೇಳಿದರೆ, ಆತನು ಕೇಳಿದ ಜ್ಞಾನವನ್ನು ಪ್ರತಿದಿನ ರಾಜನಿಗೆ ತಿಳಿಸುತ್ತಿದ್ದನು. ಹೀಗೆ ಮನುವಿಗೆ ತಿಳಿಸಿದ ಜ್ಞಾನವನ್ನು ವಿವರಿಸಿ ಹೇಳುವುದಕ್ಕೆ ಒಂದು ವರ್ಷ ಕಾಲ ಹಿಡಿಸಿದೆ. ಇಕ್ವಾಕನೆನ್ನುವ ರಾಜ ತನ್ನ ಸಲಹೆದಾರನು ಹೇಳಿದ ಜ್ಞಾನ ತಿಳಿದಂತೆಲ್ಲ ಸಲಹೆದಾರನ ಮೇಲೆ ಹೆಚ್ಚಿನ ಗೌರವವನ್ನು ತೋರಿಸುವುದಲ್ಲದೆ, ಜ್ಞಾನ ಹೇಳಿದ ಗುರುವಿನಂತೆ ಭಕ್ತಿ ಭಾವದಿಂದ ದೊಡ್ಡದಾಗಿ ನೋಡುತ್ತಿದ್ದನು. ಮನುವು ಹತ್ತಿರ ಕಲಿತ ಜ್ಞಾನವೆಂದು ರಾಜನಿಗೆ ಆತನ ಸಲಹೆದಾರನು ಹೇಳಲಿಲ್ಲ. ಅಲ್ಲಿಯವರೆಗು ಹೇಳಿದ ಜ್ಞಾನವೆಲ್ಲವೂ ಸಲಹೆದಾರನೇ ಹೇಳಿದ್ದಾನೆಂದು ರಾಜನು ಅಂದುಕೊಂಡು, ತನ್ನ ಆಸ್ಥಾನ ಪಂಡಿತನಾಗಿರುವ ಸಲಹೆದಾರನನ್ನು ಆಸ್ಥಾನ ಗುರುವಾಗಿ ಬದಲಾಯಿಸಿ ದೊಡ್ಡದಾಗಿ ಸನ್ಮಾನ ಮಾಡಿ ಗೌರವಿಸಿದ್ದಾನೆ. ತನ್ನಹತ್ತಿರ ಜ್ಞಾನವನ್ನು ಕೇಳಿದ ಮನುಷ್ಯ ಅಷ್ಟು ಗೌರವವನ್ನು ಹೊಂದುತ್ತಿದ್ದಾನೆಂದು ಮನುವಿಗೆ ಸ್ವಲ್ಪವಾದರೂ ತಿಳಿದಿಲ್ಲ. ಆಗ ಆಸ್ಥಾನ ಪಂಡಿತನಾಗಿರುವ ವ್ಯಕ್ತಿಯಲ್ಲಿ ಸ್ವಾರ್ಥ ಕೆಲಸಮಾಡಿದಾಗ ಜ್ಞಾನವೆಲ್ಲವನ್ನು ತಿಳಿದ ನಂತರ ಮನುವನ್ನು ರಾಜರೊಂದಿಗೆ ಪರಿಚಯ ಕೂಡಾ ಮಾಡಿಸದಂತೆ ಯಾವುದೋ ನೆಪ ಹೇಳಿ ತನ್ನ ಹತ್ತಿರದಿಂದ ಕಳುಹಿಸುತ್ತಿದ್ದನು.

ಮನುವು ತನ್ನ ಜ್ಞಾನವನ್ನು ಮಧ್ಯವರ್ತಿ ಮೂಲಕ ರಾಜನಿಗೆ ತಿಳಿಸಿದ್ದೇನೆನ್ನುವ ತೃಪ್ತಿಯಿಂದ ಅಲ್ಲಿಂದ ಹೋದನು. ಮನುವಿನಿಂದ ಜ್ಞಾನ ಇಕ್ವಾಕನಿಗೆ ಮಧ್ಯವರ್ತಿ ಮುಖಾಂತರ ಸೇರಿದರೂ, ಕೊನೆಗೆ ಮಧ್ಯವರ್ತಿ ಸ್ವಾರ್ಥದಿಂದ ತನಗೆ ಗೌರವ ಎಲ್ಲಿ ಕಡಿಮೆಯಾಗುತ್ತದೋಯೆಂದು ಮನುವನ್ನು ರಾಜನಿಗೆ ತೋರಿಸಲಿಲ್ಲ. ನೀವು ಹೇಳಿದ ಜ್ಞಾನವೆಲ್ಲ ರಾಜನಿಗೆ ಸೇರಿಸಿದ್ದೇನೆಂದು ಮನುವಿಗೆ ಹೇಳಿ ಕಳಿಸಿದ್ದಾನೆ. ರಾಜನಿಗೆ ಜ್ಞಾನವನ್ನು ಹೇಳಿರುವುದರಿಂದ ಏರ್ಪಟ್ಟ ಗೌರವ ಬಹಳ ದೊಡ್ಡದಾಗಿರುವುದರಿಂದ, ತನ್ನನ್ನು ಗುರುವಾಗಿ ಭಾವಿಸುವುದರಿಂದ, ಹೀಗೆ ಇತರರಿಗೆ ಜ್ಞಾನ ಹೇಳಿದರೆ ಎಲ್ಲರಿಗೂ ಗುರುವಾಗಿ

ಬದಲಾಗಿಹೋಗಬಹುದು. ಎಲ್ಲರೂ ಗುರುವಾಗಿ ತನ್ನನ್ನೇ ಪೂಜಿಸುತ್ತಾರೆ, ಗೌರವಿಸುತ್ತಾರೆನ್ನುವ ಸ್ವಾರ್ಥ ಆಸ್ಥಾನ ಪಂಡಿತನಲ್ಲಿ ಶುರುವಾಗಿದೆ. ಮನುವು ನಿಸ್ವಾರ್ಥವಾಗಿ ಹೇಳಿದ ಜ್ಞಾನವನ್ನು ಸ್ವಾರ್ಥದಿಂದ ತುಂಬಿಕೊಂಡಿದ್ದಾನೆ. ಅಲ್ಲಿಂದ ಇತರರಿಗೆ ಜ್ಞಾನವನ್ನು ಹೇಳುವ ಕೆಲಸ ತಾನು, ತನ್ನ ಕುಮಾರರು ತನ್ನ ಸಂಬಂಧಿಕರು ಮಾಡಿ ತಾನು ತನ್ನವರು, ಎಲ್ಲರೂ ಪೂಜ್ಯರಾಗಿ ಎಲ್ಲರಿಂದ ಗೌರವಿಸಲ್ಪಡಬೇಕೆಂದುಕೊಂಡಿದ್ದಾನೆ. ಆಗಲೇ ಬ್ರಹ್ಮವಿದ್ಯೆಯನ್ನು ಕಲಿತವ ನಾದ್ದರಿಂದ ವಿದ್ಯೆಯನ್ನು ಅನುಸರಿಸಿ ಹೆಸರು ಬಂದಂತೆ ತನ್ನನ್ನು ಬ್ರಾಹ್ಮಣನಾಗಿ ಹೇಳಿಕೊಳ್ಳುವುದು ಶುರುಮಾಡಿದ್ದಾನೆ. ಆ ದಿನ ಎಲ್ಲರಿಗೂ ವಿದ್ಯೆಯಿಂದ ಏರ್ಪಟ್ಟ ಹೆಸರೆಂದು, ಅದು ವೃತ್ತಿ ಹೆಸರೆಂದು ಎಲ್ಲರಿಗೂ ತಿಳಿದ ವಿಷಯವೇ. ಆ ದಿನ ಬ್ರಾಹ್ಮಣತ್ವ ಬ್ರಹ್ಮವಿದ್ಯೆ ಕಲಿತವರ ವೃತ್ತಿಯೆಂದು ಅಂದುಕೊಂಡಿದ್ದಾರೆ ಹೊರತು, ಬ್ರಾಹ್ಮಣನು ಎನ್ನುವುದು ಕುಲ ಎಂದು ಯಾರೂ ಅಂದುಕೊಳ್ಳಲಿಲ್ಲ. ಆ ದಿನ ಆಸ್ಥಾನ ಪಂಡಿತನು ಕೂಡಾ ಬ್ರಾಹ್ಮಣತ್ವ ಬೋಧಿಸುವ ವೃತ್ತಿಯೆಂದು, ಅದು ಬ್ರಹ್ಮವಿದ್ಯೆ ಕಲಿತವರಿಗೇ 'ಬ್ರಾಹ್ಮಣನು' ಎನ್ನುವ ಹೆಸರು ಬರುತ್ತದೆಂದು ಅಂದುಕೊಂಡಿದ್ದಾನೆ.

ಸೃಷ್ಠಿ ಆದಿಯಲ್ಲಿ ಮೊಟ್ಟಮೊದಲು ಆಕಾಶವಾಣಿ ಮೂಲಕ ದೇವರು ಜ್ಞಾನವನ್ನು ತಿಳಿಸಿದಾಗ ಆ ದಿನ ಶಬ್ದರೂಪದಲ್ಲಿ (ಗುಡುಗಿನ ಶಬ್ದದಿಂದ) ಬಂದಿರುವ ಜ್ಞಾನವನ್ನು ಸೂರ್ಯನು ಗ್ರಹಿಸಿದ್ದಾನೆ. ಸೂರ್ಯನು ಗ್ರಹಿಸಿದ ಜ್ಞಾನ ಸ್ವಲ್ಪ ಕಾಲ ಕಳೆದ ನಂತರ ಸೂರ್ಯನು ಮನುವಿಗೆ ತಿಳಿಸಿದ್ದಾನೆ. ಸೂರ್ಯನು ಜ್ಞಾನವನ್ನು ಗ್ರಹಿಸಿದ ತಕ್ಷಣ ಭೂಮಿಮೇಲೆ ತಿಳಿಸಲಿಲ್ಲ. ಕೆಲವು ಸಾವಿರ ವರ್ಷಗಳು ಕಳೆದ ನಂತರ ಜ್ಞಾನವನ್ನು ತಿಳಿಯುವುದಕ್ಕೆ ಅರ್ಹನಾದ ಮನುಷ್ಯ 'ಮನುವು' ಎನ್ನುವ ವ್ಯಕ್ತಿ ದೊರೆತಾಗ ಆತನಿಗೆ ಸೂರ್ಯನು ಹೇಳಿದ್ದಾನೆ. ಸೂರ್ಯನು ಸುಮಾರು 360 ದಿನಗಳು ಅಂದರೇ ಸುಮಾರು ಒಂದು ವರ್ಷಕಾಲ ಮನುವಿಗೆ ಬೋಧಿಸಿದ್ದಾನೆ. ನಂತರ ಮನುವು ರಾಜನಿಗೆ ಜ್ಞಾನ ತಿಳಿಸಬೇಕೆಂದು ಒಂದು ವರ್ಷಕಾಲ ಕಾದುನೋಡಿ ಕೊನೆಗೆ ಮಧ್ಯವರ್ತಿ ಮೂಲಕ

ಇಕ್ಷ್ವಾಕನೆನ್ನುವ ರಾಜನಿಗೆ ತನ್ನ ಜ್ಞಾನವನ್ನು ತಿಳಿಸಿದ್ದಾನೆ. ಸೃಷ್ಠಿ ನಡೆದ ನಂತರ ಕೆಲವು ಸಾವಿರ ವರ್ಷಗಳಿಗೆ ಸೂರ್ಯನಿಗೆ ಜ್ಞಾನ ಹೇಳಲ್ಪಟ್ಟಿದೆ. ಈ ವಿಧವಾಗಿ ಭೂಮಿಮೇಲೆ ಜ್ಞಾನ ಹರಡುವುದಕ್ಕೆ ಸುಮಾರು ಲಕ್ಷ ವರ್ಷಗಳ ಕಾಲ ಹಿಡಿಸಿರಬಹುದು. ಆಗಾಗಲೇ ಭೂಮಿಮೇಲೆ ಮಾಯೆ ಪ್ರಭಾವದಿಂದ ಕುಲಗಳು ಹುಟ್ಟಿಬಂದಿವೆ. ಆಗಾಗಲೇ ಕೆಲವರು ದೇವತೆಗಳ ಭಕ್ತಿಯನ್ನು ಬೋಧಿಸುತ್ತಾ ಗುರುಗಳಾಗಿ ತಯಾರಾಗಿ ಪ್ರಜೆಗಳಿಂದ ಚೆನ್ನಾಗಿ ಗೌರವಿಸಲ್ಪಡುತ್ತಿದ್ದರು.

ಭೂಮಿಮೇಲೆ ಮನುವು ಮೂಲಕ ಜ್ಞಾನ ತಿಳಿಯಲಟ್ಟರೂ ಆತ್ಮಜ್ಞಾನ ಇಲ್ಲದಿದ್ದರೂ ದೇವತೆಗಳ ಜ್ಞಾನ ಚೆನ್ನಾಗಿ ಇತ್ತು. ಸೂರ್ಯನಿಂದ ಮನುವಿಗೆ ಹೇಳಲ್ಪಟ್ಟ ವಿದ್ಯೆ ಬ್ರಹ್ಮವಿದ್ಯೆ. ಅಲ್ಲಿಯವರೆಗು ಭೂಮಿಮೇಲೆ ಬ್ರಹ್ಮವಿದ್ಯೆ ಇಲ್ಲದಂತಿತ್ತು. ಯಾವಾಗ ಬ್ರಹ್ಮವಿದ್ಯೆ ಬಂದಿದೆಯೋ ಆಗ ಆ ವಿದ್ಯೆಯನ್ನು ಕಲಿತವನು ಬ್ರಾಹ್ಮಣನು ಎಂದು ಹೇಳಲ್ಪಡುತ್ತಿತ್ತು. ವೈದ್ಯ ವಿದ್ಯೆಯನ್ನು ಕಲಿತವನು ಹೇಗೆ ಡಾಕ್ಟರ್ ಎಂದು ಕರೆಯಲ್ಪಡುತ್ತಿದ್ದಾನೊ, ಹಾಗೆಯೇ ಬ್ರಹ್ಮವಿದ್ಯೆಯನ್ನು ಕಲಿತವನು ಬ್ರಾಹ್ಮಣನು ಎಂದು ಹೇಳಲ್ಪಡುವುದರಿಂದ ಆ ದಿನ ಬ್ರಾಹ್ಮಣ ಎನ್ನುವುದು ವೃತ್ತಿಯ ಹೆಸರಾಗಿರುತ್ತಿತ್ತು. ಭೂಮಿಮೇಲೆ ಆತ್ಮಜ್ಞಾನವಾದ ಬ್ರಹ್ಮವಿದ್ಯೆ ತಿಳಿಯದೆ ಮೊದಲೇ ದೇವತೆಗಳು, ದೇವಾಲಯಗಳು, ಪ್ರಕೃತಿಯಲ್ಲಿನ ಗಿಡಗಳನ್ನು, ಹಾವುಗಳನ್ನು, ಪ್ರಾಣಿಗಳನ್ನು ಪೂಜಿಸುತ್ತಿದ್ದರು. ಮುಖ್ಯವಾಗಿ ಸೂರ್ಯ ಚಂದ್ರರನ್ನು, ಭೂಮಿಯನ್ನು ಆರಾಧಿಸುತ್ತಿದ್ದರು. ಆ ದಿನ ದೇವಾಲಯಗಳಲ್ಲಿ ಆರಾಧನೆ ವಿಧಾನವನ್ನು ಏರ್ಪಡಿಸಿ ಆರಾಧನೆಗಳು ಮಾಡುವ ಪೂಜಾರಿಗಳು ಕೂಡಾ ಇದ್ದರು. ಆದರೇ ಆ ದಿನ ದೇವತೆಗಳನ್ನು ಪೂಜಿಸುವ ಪೂಜಾರಿಗಳು ಶುಭವು ಮಾಡುವವರಾಗಿ ಇದ್ದರು. ಆ ದಿನ ಇದ್ದ ಕುಲಗಳಲ್ಲಿ **'ಮಂಗಳಮ್'** ಎನ್ನುವ ಕುಲ ಇತ್ತು. ಮಂಗಳಮ್ ಎಂದರೇ **'ಶುಭಂ'** ಎಂದು ಅರ್ಥ. ಅವರನ್ನೇ ಶುಭಕರವಾದವರೆಂದು, ಅವರು ಪವಿತ್ರರೆಂದು ಅವರಿಂದಲೇ ದೇವತೆಗಳ ಪೂಜೆಗಳು ಮಾಡಿಸುತ್ತಿದ್ದರು. ಆ ದಿನ ಪೂಜೆಗಳಲ್ಲಿ ವೇದಪಠನೆಗಳು ಇರುತ್ತಿರಲಿಲ್ಲ. ಅಸಲು ವೇದಗಳ ವಿಷಯವೇ ಅವರಿಗೆ ತಿಳಿದಿಲ್ಲ. ದೇವತೆಗಳ

ಪೂಜಾರಿಗಳಾಗಿರುವವರು ದೇವಾಲಯಗಳಲ್ಲಿ ವೇದಮಂತ್ರ ಪಠನೆ ಬದಲು ಅವರು ಪೂಜೆಗಾಗಿ ತಯಾರಿ ಮಾಡಿಕೊಂಡ ವಾದ್ಯಗಳನ್ನು ನುಡಿಸುತ್ತಿದ್ದರು. ಅದೇ ಅಂದಿನ ವೇದಪಠನೆಯಾಗಿ ಭಾವಿಸಬಹುದು. ವಾದ್ಯ ಆರಾಧನೆ ಯಿಂದ ಊರಿನಲ್ಲಿನ ಎಲ್ಲರಿಗೂ ಪೂಜೆಗಳು ನಡೆಯುತ್ತಿರುವಂತೆ ತಿಳಿಯುತ್ತಿದೆ. ಗುಡಿಮುಂದೆ ಕೆಲವರು ವಾದ್ಯಗಳು ನುಡಿಸುತ್ತಿರುವಾಗ, ಕೆಲವರು ಗುಡಿಯೊಳಗೆ ಅಭಿಷೇಕ ಮಾಡಿ, ವಸ್ತ್ರ ಅಲಂಕರಣೆ ಮಾಡಿ, ನಾಮಗಳು ತಿದ್ದಿ, ನೈವೇದ್ಯಗಳು ಇಟ್ಟು, ತೆಂಗಿನಕಾಯಿ ಹೊಡೆಯುತ್ತಿದ್ದರು.

ಮಂಗಳಮ್ ಎನ್ನುವ ಪದ ಪವಿತ್ರವಾದುದೆನ್ನುವ ಅರ್ಥದಿಂದ ಇರುವಾಗ ಆ ಕುಲದವರು ಪವಿತ್ರವಾಗಿಯೇ ಪೂಜೆಗಳು ನಿರ್ವಹಿಸುತ್ತಿದ್ದರು. ಮಂಗಳಮ್ ಎನ್ನುವ ಕುಲದ ಹೆಸರು ಕಾಲಕ್ರಮವಾಗಿ 'ಮಂಗಳ' ಎನ್ನುವ ಹೆಸರಾಗಿ ತಯಾರಾಗಿದೆ. ಪೂಜೆಗಳು ಮಾಡುವ ಮಂಗಳಮ್ ಎನ್ನುವವರು ಈ ದಿನ ಮಂಗಳದವರಾಗಿ ಬದಲಾಗಿದ್ದಾರೆ. ಆದರೇ ಈ ದಿನ ಅವರ ಸ್ಥಾನಗಳಲ್ಲಿ ದೇವಾಲಯಗಳಲ್ಲಿ ಪೂಜೆಗಳು ಮಾಡುವವರು ಬ್ರಾಹ್ಮಣರು ಬಂದಿದ್ದಾರೆ. ಬ್ರಹ್ಮವಿದ್ಯೆಯನ್ನು ಕಲಿತವರು ಬ್ರಾಹ್ಮಣರಾಗಿ ತಯಾರಾಗುತ್ತಾ ವೃತ್ತಿ ಹೆಸರನ್ನು ಕುಲದ ಹೆಸರಾಗಿ ಮಾರ್ಪಡಿಸಿಕೊಂಡಿದ್ದಾರೆ. ಈ ದಿನ ಕ್ರೈಸ್ಥವ ಮತದೊಳಗೆ ಹಿಂದೂಮತದಲ್ಲಿನ ಯಾವ ಕುಲಸ್ಥನು ಸೇರಿದರೂ ಅವನನ್ನು ಇಂತಹ ಕುಲಸ್ಥನು ಎನ್ನದಂತೆ ಕ್ರೈಸ್ಥವನು ಎನ್ನುವಂತೆ ಯಾವ ಮತಸ್ಥನು ಬ್ರಹ್ಮವಿದ್ಯೆಯನ್ನು ಕಲಿತರೂ ಅವನನ್ನು ಬ್ರಾಹ್ಮಣ ಎನ್ನುವುದು, ಆ ಬ್ರಾಹ್ಮಣತ್ವವನ್ನೇ ಕುಲವಾಗಿ ಮಾರ್ಪಡಿಸಿಕೊಂಡು ಅವನ ಮೊದಲ ಕುಲದ ಹೆಸರು ಹೇಳದಂತೆ ಬ್ರಾಹ್ಮಣನು ಎಂದು ಅದನ್ನೇ ಕುಲವಾಗಿ ಹೇಳಿಕೊಳ್ಳುತ್ತಿದ್ದಾರೆ.

ಅನೇಕ ಕುಲಗಳಿಂದ ಬಂದವರು ಬ್ರಹ್ಮವಿದ್ಯೆಯನ್ನು ಕಲಿತು ಬ್ರಾಹ್ಮಣ ಕುಲವಾಗಿ ತಮ್ಮ ಕುಲವನ್ನು ಬದಲಾಯಿಸಿಕೊಳ್ಳುತ್ತಿದ್ದಾರೆ. ಹಾಗೆ ಸ್ವಲ್ಪಕಾಲ ಬಹಳ ಕುಲದವರು ಬ್ರಾಹ್ಮಣರಾಗಿ ಪ್ರಕಟಿಸಿಕೊಂಡಿದ್ದಾರೆ. ಆಗ ಅಗ್ರಕುಲವಾಗಿರು ವವರು ಗುಡಿಯಲ್ಲಿ ಪೂಜೆಗಳು ಮಾಡುವ ಮಂಗಳಮ್ ಎನ್ನುವ ಕುಲದವರೇ.

ಬ್ರಹ್ಮವಿದ್ಯೆಯನ್ನು ಕಲಿತವರು ನಾವು ಮಂಗಳಮ್ ಅವರಿಗಿಂತ ದೊಡ್ಡವರೆಂದು ಹೇಳಿಕೊಳ್ಳುವುದು, ಒಬ್ಬರಿಗೊಬ್ಬರು ಪೋಟಿಬೀಳುವುದು, ನಾವು ದೊಡ್ಡ ವರೆಂದರೇ ನಾವು ದೊಡ್ಡವರೆಂದು ಅಂದುಕೊಳ್ಳುವುದು ನಡೆಯುತ್ತಿತ್ತು. ಅಲ್ಲಿಗೆ ಬ್ರಾಹ್ಮಣರು ಒಂದು ಕುಲವಾಗಿ ಒಟ್ಟಾರೆ ಕೂಡಿ ಏರ್ಪಟ್ಟಿರುವುದರಿಂದ ಹೊಸದಾಗಿ ಬ್ರಹ್ಮವಿದ್ಯೆ ಕಲಿತು ಬ್ರಾಹ್ಮಣರಾಗಿ ಬದಲಾಗುವವರು ಇಲ್ಲದಂತೆ ಹೋಗಿದ್ದಾರೆ. ಅಲ್ಲಿಯವರೆಗು ಬದಲಾದವರೇ ಬ್ರಾಹ್ಮಣರಾಗಿ ಇರುತ್ತಿದ್ದರು. ಬ್ರಾಹ್ಮಣ ಕುಲ ಮಧ್ಯದಲ್ಲಿ ಹುಟ್ಟಿಬಂದ ಕುಲ. ವಾಸ್ತವವಾಗಿ ಅದು ಕುಲವಲ್ಲದಿದ್ದರೂ, ಅದು ವೃತ್ತಿ ಹೆಸರಾದರೂ ಕೊನೆಗೆ ಅದು ಕುಲವಾಗಿ ಬದಲಾಗಿಹೋಗಿದೆ. ಬ್ರಾಹ್ಮಣ ಕುಲವಾಗಿ ಬದಲಾದವರಲ್ಲಿ ಎಲ್ಲಾ ಕುಲದವರು ಇದ್ದರೂ, ಕೊನೆಗೆ ಕಾಲ ಕಳೆದಂತೆಲ್ಲ, ಅವರು ಯಾವ ಕುಲದಿಂದ ಬಂದಿದ್ದಾರೊ ಪೂರ್ತಿಯಾಗಿ ಮರೆತುಹೋಗಿ ಪೂರ್ವದಿಂದ ನಮ್ಮದು ಬ್ರಾಹ್ಮಣ ಕುಲವೇಯೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಬ್ರಾಹ್ಮಣ ಕುಲದಲ್ಲಿ ಅನೇಕ ಕುಲಗಳ ಮಿಶ್ರಮಗಳಿವೆಯೆಂದು ಈ ದಿನ ಬ್ರಾಹ್ಮಣರಾಗಿರುವವರಿಗೇ ತಿಳಿದಿಲ್ಲ. ಅವರ ಶರೀರಗಳಲ್ಲಿ ಅನೇಕ ಕುಲಗಳ ಲಕ್ಷಣಗಳು, ಜೀನ್ಸ್ ಇರುವುದರಿಂದ ಅವರಲ್ಲಿ ಅನೇಕ ಭಾವನೆಗಳಿವೆ. ಪೂರ್ವದಲ್ಲಿ ಅವರ ಹಿರಿಯರು ಉನ್ನತ ಕುಲದವರಾಗಿ, ಉನ್ನತ ಭಾವನೆಗಳು ಇರುವವರಾಗಿ, ಶಾಖಾಹಾರಿಗಳಾಗಿ ಇರುವವರು ಇಂದಿಗೂ ಶಾಖಾಹಾರರಾಗಿಯೇ ಇದ್ದಾರೆ. ಕೆಲವರ ಹಿರಿಯರು ಮಾಂಸಾಹಾರರಾಗಿ ಇರುವವರಾದರೆ ಈದಿನ ಬ್ರಾಹ್ಮಣ ಕುಲದಲ್ಲಿ ಇರುವವರು ಕಳ್ಳತನದಿಂದ ಮಾಂಸವನ್ನು ತಿನ್ನುತ್ತಲೇ ಇದ್ದಾರೆ. ಮನೆಯಲ್ಲಿ ತಿನ್ನದಿದ್ದರೂ ಹೊಸ ಊರಿಗೆ ಹೋದಾಗ ಅಲ್ಲಿ ತಾವು ಯಾರೆನ್ನುವ ವಿಷಯ ಯಾರಿಗೂ ತಿಳಿದಿಲ್ಲ ಆದ್ದರಿಂದ ಅಲ್ಲಿನ ಹೋಟಲ್‌ಗಳಲ್ಲಿ ಪ್ರತ್ಯಕ್ಷವಾಗಿ ತಿನ್ನುವುದು ನಾನೇ ಎಷ್ಟೋ ಸಲ ನೋಡಿದ್ದೇನೆ. ಪೂರ್ವದಲ್ಲಿ ಅವರ ಹಿರಿಯರ ಭಾವನೆಗಳನ್ನನು ಸರಿಸಿ ಈದಿನ ಅವೇ ಭಾವನೆಗಳೇ ಕೆಲವರಲ್ಲಿ ಕಾಣಿಸುತ್ತಿವೆ.

ಮೊದಲು ದೇವಾಲಯಗಳಲ್ಲಿ ಪೂಜೆ ಮಾಡುವವರು ಮಂಗಳಮ್ ಅವರಾಗಿದ್ದು, ಅವರಿಗೆ ಪೋಟಿಯಾಗಿ "ಬ್ರಹ್ಮವಿದ್ಯೆಯನ್ನು ಕಲಿತವರು ನಾವು"

ಎಂದು ಬ್ರಾಹ್ಮಣರು ಬರುವುದು, ಅವರಿಗಿಂತ ನಾವೇ ಹಿರಿಯರೆಂದು ಹೇಳಿಕೊಳ್ಳುವುದು, ನಂತರ ನಿಧಾನವಾಗಿ ದೇವಾಲಯಗಳಲ್ಲಿ ಅರ್ಚನೆ (ಪೂಜೆ) ಮಾಡುವ ಕಾರ್ಯಗಳನ್ನು ತಾವೇ ಮಾಡುವುದು ಮಾಡುತ್ತಾ ನಿಧಾನವಾಗಿ ದೇವಾಲಯಗಳಲ್ಲಿ ನಾವೇ ಹಕ್ಕುದಾರರು ಎಂದು ಪ್ರಕಟಿಸಿಕೊಳ್ಳುವುದು ನಡೆದಿದೆ. ಸ್ವಲ್ಪಕಾಲಕ್ಕೆ ಅವರು, ಇವರು ಪೂಜೆಗಳು ಮಾಡುತ್ತಾ ಪೂರ್ತಿಯಾಗಿ ಬೆರೆತುಹೋಗಿದ್ದಾರೆ. ಆಗ ಅವರಲ್ಲಿ ಎಲ್ಲಿಯೋ ಒಂದುಕಡೆ ಸಂಕ್ರಮಣ ಏರ್ಪಟ್ಟಿದೆ. ಅರ್ಥ ವಾಗದಿದ್ದರೆ ಅಕ್ರಮ ಸಂಬಂಧ ಎಂದು ಹೇಳಬಹುದು. ಹೇಗೆಂದರೇ! ಆಗ ಒಬ್ಬ ಬ್ರಾಹ್ಮಣನಿಗೆ ಇಬ್ಬರು ಹೆಂಡತಿಯರು ಇರುತ್ತಿದ್ದರು. ಅವರಲ್ಲಿ ಒಬ್ಬರು ಬ್ರಾಹ್ಮಣ ಸ್ತ್ರೀಯಾಗಿದ್ದು ಮತ್ತೊಬ್ಬರು ಮಂಗಳಮ್ ಸ್ತ್ರೀ ಇರುತ್ತಿದ್ದಳು. ಆಗ ಇಬ್ಬರಿಗು ಆಗಿರುವ ಸಂತಾನ ಬ್ರಾಹ್ಮಣರೇಯೆಂದು ಹೇಳಬೇಕಾಗಿ ಬಂದಿದೆ. ಹಾಗೆ ಕಾಲಕ್ರಮದಲ್ಲಿ ಮಂಗಳರು ಕೂಡಾ ಬ್ರಾಹ್ಮಣರೇಯೆಂದು, ಬ್ರಾಹ್ಮಣ ಸಂತತಿಯಿಂದ ಬಂದವರೇಯೆಂದು ಹೇಳುವುದು ನಡೆದಿದೆ. ಎಲ್ಲೋ ಒಬ್ಬರೊ ಇಬ್ಬರೊ ಹಾಗೆ ಇರುವುದರಿಂದ ಎಲ್ಲರಿಗೂ ಅದೇ ಹೆಸರು ಬಂದಿದೆ. ಕೊನೆಗೆ ಅಕ್ರಮ ಸಂಬಂಧದಿಂದ ಬ್ರಾಹ್ಮಣರಿಗೆ ಹುಟ್ಟಿದವರೆಂದು ಮಂಗಳಮ್ ಅವರಿಗೆ ಹೆಸರು ಬರುವುದು ನಡೆದಿದೆ. ಮಂಗಳದವರೆಂದು ಹೆಸರಿದ್ದರೂ ಅವರು ಬ್ರಾಹ್ಮಣ ಸಂತತಿಯೇ ಎಂದು ಕೆಲವರು ಹೇಳುತ್ತಿದ್ದರು. ಅಷ್ಟೇ ಅಲ್ಲದೆ ಮಂಗಳದವರನ್ನು ಬ್ರಾಹ್ಮಣರಾಗಿಯೇ ಲೆಕ್ಕಿಸಿ ಪ್ರಜೆಗಳು ಕರೆಯುತ್ತಿದ್ದರು. ಹೀಗೆ ಕೆಲವು ಸಾವಿರ, ಕೆಲವು ಲಕ್ಷಗಳ ವರ್ಷಗಳು ಕಳೆದುಹೋದಂತೆಲ್ಲ ಪೂರ್ವದಲ್ಲಿ ಏನು ನಡೆದಿದೆಯೋ ಈಗಿನ ಬ್ರಾಹ್ಮಣರಿಗಾಗಲಿ, ಹಾಗೆಯೇ ಮಂಗಳರಿಗಾಗಲಿ ತಿಳಿದಿಲ್ಲ. ಈ ಮಧ್ಯೆ 1500 ವರ್ಷಗಳ ಕೆಳಗಿನವರೆಗು ಎಲ್ಲರೂ ಬ್ರಾಹ್ಮಣರ ಹೆಸರಿನಿಂದ ಚಲಾವಣೆ ಆಗುತ್ತಿದ್ದರು. ಆದರೇ ಕೃಷ್ಣದೇವರಾಯರ ಕಾಲದಲ್ಲಿ ಬಹುಶ 15 ಇಲ್ಲವೇ 16 ನೂರು ವರ್ಷಗಳ ಸಮಯದಲ್ಲಿ ಪೂರ್ತಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ತೆನಾಲಿ ರಾಮಲಿಂಗ ಎನ್ನುವ ವ್ಯಕ್ತಿ ಮಂಗಳದವರು ಬ್ರಾಹ್ಮಣರಾಗಿ ಕರೆಯಲ್ಪಡುವುದು ಆತನಿಗೆ ಸರಿಹೋಗಲಿಲ್ಲ. ಮೊದಲಿನಿಂದ ಅವರಲ್ಲಿ

ಮಂಗಳರು ಬ್ರಾಹ್ಮಣರ ಅಕ್ರಮ ಸಂತಾನವೆಂಬ ಮಾತು ಇತ್ತು. ಅದು ಕೃಷ್ಣ ದೇವರಾಯರ ಕಾಲದಲ್ಲಿ ತೆನಾಲಿ ರಾಮಕೃಷ್ಣನ ಮೂಲಕ ಸ್ವಲ್ಪ ಬದಲಾವಣೆ ನಡೆದಿದೆ. ಕೃಷ್ಣ ದೇವರಾಯರ ಕಾಲದಲ್ಲಿ ಬದಲಾವಣೆಗಳು ಹೇಗೆ ಸ್ಥಳ ಮಾಡಿಕೊಂಡಿವೆಯೋ ಗತದಲ್ಲಿ **"ಸುಬೋಧ"** ಗ್ರಂಥದಲ್ಲಿ ಸ್ವಲ್ಪ ಬರೆದಿದ್ದೇವೆ. ಈಗ ಆ ಗ್ರಂಥದಲ್ಲಿನ ಸಮಾಚಾರವನ್ನು ಇಲ್ಲಿ ಹೊಂದಿಸುತ್ತಿದ್ದೇವೆ ನೋಡಿರಿ.

## ಬ್ರಾಹ್ಮಣ – ನಾಯಿ ಬ್ರಾಹ್ಮಣ

ಬ್ರಾಹ್ಮಣರನ್ನು, ನಾಯಿಬ್ರಾಹ್ಮಣರನ್ನು ತಿಳಿಯದವರಿಲ್ಲ ಎಂದು ಕೊಳ್ಳುತ್ತೇನೆ. ಏಕೆಂದರೆ! ಯಾವಾಗಲೋ ಒಂದುಬಾರಿ ತಪ್ಪದೆ ಅವರ ಬಳಿಗೆ ಹೋಗಬೇಕಾದ ಅವಶ್ಯಕತೆ ಎಲ್ಲರಿಗೂ ಇದೆ. ಮನೆಯಲ್ಲಿ ಯಾರಾದರೂ ಹುಟ್ಟಿದರೆ ಅವರಿಗೆ ನಾಮಕರಣಕ್ಕೋಸ್ಕರ, ಜಾತಕಕ್ಕೋಸ್ಕರ, ಯಾರಾದರೂ ಮರಣಿಸಿದರೆ ಅವರ ಕರ್ಮ ತಂತ್ರಗಳಿಗೋಸ್ಕರ, ಬದುಕಿದಾಗ ಪಂಚಾಂಗ ಕೇಳುವುದಕೋಸ್ಕರ, ಬ್ರಾಹ್ಮಣರ ಹತ್ತಿರಕ್ಕೆ ತಪ್ಪದೆ ಹೋಗಬೇಕಾಗಿದೆ. ನಾಯಿ ಬ್ರಾಹ್ಮಣರ (ಮಂಗಳರ) (ಕ್ಷೌರಿಕರ) ಹತ್ತಿರಕ್ಕಾದರೆ ತಲೆಕೂದಲು ಬೆಳೆದಾಗ, ಗಡ್ಡ ಬೆಳೆದಾಗ ತಿಂಗಳಿಗೊಂದುಸಲವಾದರೂ ಹೋಗಬೇಕಾಗಿದೆ. ಆದ್ದರಿಂದ ಬ್ರಾಹ್ಮಣರು, ನಾಯಿ ಬ್ರಾಹ್ಮಣರು ಇಬ್ಬರೂ ಪ್ರಜೆಗಳಿಗೆ ಸುಪರಿಚಿತರೇ ಎಂದು ಹೇಳಬಹುದು. ಈಗಿನ ಕಾಲದಲ್ಲಿ ಇವರ ಕೆಲಸ ಎಲ್ಲರಿಗೂ ತಿಳಿದಿರುವುದೆ, ಆದರೂ ಪೂರ್ವಕಾಲದಲ್ಲಿ ಇವರು ಮುಖ್ಯವಾಗಿ ಮಾಡುತ್ತಿರುವ ಕೆಲಸ ಏನು? ಅವರಿಗಾಹೆಸರು ಹೇಗೆ ಬಂದಿದೆ? ಎಂದು ಯೋಚಿಸಿದರೆ ಕೆಲವು ಹೊಸ ವಿಷಯಗಳು ತಿಳಿಯುತ್ತಿವೆ. ಅವು ಏನೋ ನೋಡೋಣವಾ!

ಪೂರ್ವದಲ್ಲಿ ಕೃತಯುಗದ ನಂತರ ತ್ರೇತಾಯುಗದಲ್ಲಿಯೇ ಬ್ರಾಹ್ಮಣ ಕುಲ ದೊಡ್ಡಕುಲವಾಗಿ ಹೆಸರುವಾಸಿಯಾಗಿದೆ. ಎಲ್ಲಾ ಕುಲಗಳಿಗಿಂತ ದೊಡ್ಡ ಕುಲವಾಗಿ ಹೆಸರುಗಳಿಸುವುದಕ್ಕೆ ಕಾರಣವೇನೆಂದರೆ ಬ್ರಾಹ್ಮಣರು ಮಾತ್ರ

ಬ್ರಹ್ಮವಿದ್ಯೆಯನ್ನು ಕುರಿತು ಬೋಧಿಸುತ್ತಿದ್ದರು. ಎಲ್ಲಾ ವಿದ್ಯೆಗಳಿಗಿಂತ ದೊಡ್ಡ ವಿದ್ಯೆಯಾದ ಬ್ರಹ್ಮವಿದ್ಯೆಯನ್ನು ಬೋಧಿಸುತ್ತಿದ್ದರು, ಆದ್ದರಿಂದ ಆ ಕುಲವನ್ನು ದೊಡ್ಡ ಕುಲವಾಗಿ ಪರಿಗಣಿಸುತ್ತಿದ್ದರು. ಬ್ರಹ್ಮವಿದ್ಯೆಯನ್ನು ಬೋಧಿಸುತ್ತಿದ್ದರು ಆದ್ದರಿಂದ ಬ್ರಾಹ್ಮಣರೆಂದು ಹೆಸರು ಬಂದಿದೆ. ಅಂದಿನ ರಾಜರಹತ್ತಿರ ಸಹ ಗುರುಗಳಾಗಿ, ಆಸ್ಥಾನಪಂಡಿತರಾಗಿ ಸ್ಥಾನವನ್ನು ಬ್ರಾಹ್ಮಣರು ಹೊಂದಿದ್ದರು. ಬ್ರಾಹ್ಮಣರ ಮಾತಿಗೆ ರಾಜರು ಸಹ ಎದುರು ಹೇಳುವವರಲ್ಲ. ಈ ವಿಧವಾಗಿ ಸ್ವಲ್ಪಕಾಲ ನಡೆಯುತ್ತಾಹೋದಾಗ, ಭೂಮಿಮೇಲೆ ದೇವಾಲಯಗಳು ಹೆಚ್ಚಾಗಿ ಹೋಗಿವೆ. ಪ್ರತಿ ದೇವರಿಗು ಇಬ್ಬರು ಹೆಂಡತಿಯರನ್ನು ದೇವಾಲಯಗಳಲ್ಲಿ ಇಡುವುದು ನಡೆದಿದೆ. ದೇವಾಲಯಗಳನ್ನು ನಿರ್ಮಿಸಿರುವುದು, ಅದರಲ್ಲಿ ಪ್ರತಿಮೆಗಳನ್ನು ಪ್ರತಿಷ್ಠಿಸಿರುವುದು ಬ್ರಾಹ್ಮಣರೆ. ಪ್ರಜೆಗಳಲ್ಲಿ ದೇವತೆಗಳಿಗೆ ಸಮಾನವಾದ ಗೌರವವಿರುವ ಬ್ರಾಹ್ಮಣರು ಸಹ ಗುಡಿಯಲ್ಲಿನ ದೇವತೆಗಳಂತೆ ಇಬ್ಬರು ಹೆಂಡತಿಯರನ್ನು ವಿವಾಹಮಾಡಿಕೊಳ್ಳುವುದು ಆರಂಭಿಸಿದರು. ಗುಡಿಯಲ್ಲಿನ ದೇವರುಗಳಿಗೆ ಇಬ್ಬರು ಹೆಂಡತಿಯರಿರುವಂತೆ ಅಂದಿನ ಬ್ರಾಹ್ಮಣರಿಗೂ ಸಹ ಇಬ್ಬರು ಹೆಂಡತಿಯುರು ಇರುವುದರಿಂದ ಬ್ರಾಹ್ಮಣರು ಭೂಮಿಮೇಲೆ ದೇವತೆಗಳೆಂದು, ಭೂಸುರರೆಂದು ಹೆಸರುವಾಸಿಯಾದರು. ಬಹುಪತ್ನಿತ್ವವನ್ನು ಅಂದಿನ ಬ್ರಾಹ್ಮಣರೇ ಹೆಚ್ಚಾಗಿ ಹೊಂದಿರುತ್ತಿದ್ದರು. ಅಷ್ಟೇ ಅಲ್ಲದೆ ಅಂದಿನ ರಾಜರು ಸಹ ಕೆಲವರು ಇಬ್ಬರು ಹೆಂಡತಿಯರನ್ನು ಹೊಂದಿರುತ್ತಿದ್ದರು. ಆಗಿನ ತ್ರೇತಾಯುಗದಲ್ಲಿಯೇ ದಶರಥನು ಮೂವರು ಹೆಂಡತಿಯರನ್ನು ಹೊಂದಿರುವುದು ಎಲ್ಲರಿಗೂ ತಿಳಿದಿದೆ. ಅಂದಿನ ರಾಜರಾಗಲಿ, ಬ್ರಾಹ್ಮಣರಾಗಲಿ ಮೊದಲ ಹೆಂಡತಿಗೆ ಹುಟ್ಟಿದ ಸಂತಾನಕ್ಕೇ ಹೆಚ್ಚಿನ ಪ್ರಧಾನ್ಯತೆ ಕೊಡುತ್ತಿದ್ದರು. ಅದೇ ವಿಧಾನದಿಂದಲೇ ದೊಡ್ಡ ಹೆಂಡತಿಗೆ ಹುಟ್ಟಿದ ರಾಮನಿಗೆ ರಾಜ್ಯವನ್ನು ಕಟ್ಟಬೇಕೆಂದು ಧಶರಥನು ಅಂದುಕೊಳ್ಳುವುದು, ಅದನ್ನು ಚಿಕ್ಕ ಹೆಂಡತಿ ವಿರೋಧಿಸುವುದು ನಡೆದಿದೆ.

ಅಂದಿನ ಬ್ರಾಹ್ಮಣರಲ್ಲಿಯೂ ಸಹ ಮೊದಲ ಹೆಂಡತಿಯ ಸಂತತಿಗೆ ಪ್ರಾಧಾನ್ಯತೆ ಕೊಡುತ್ತಿದ್ದರೆಂದುಕೊಂಡಿದ್ದೇವಲ್ಲ! ಅದರ ಪ್ರಕಾರವೇ ದೇವಾಲಯ

ದಲ್ಲಿ ಬ್ರಹ್ಮಜ್ಞಾನವನ್ನು ಬೋಧಿಸುವ ಕಾರ್ಯವನ್ನು ಎರಡು ವಿಧಗಳಾಗಿ ವಿಭಜಿಸಿ, ಒಂದು ಒಳಗೆ ಬೋಧಿಸುವವರೂ, ಎರಡು ಹೊರಗೆ ಕಾರ್ಯ ರೂಪವಾಗಿ ತೋರಿಸುವವರೂ ಎಂದು ಎರಡು ಕಾರ್ಯಗಳನ್ನಿಟ್ಟಿದ್ದಾರೆ. ಅಂದಿನ ಬ್ರಾಹ್ಮಣರು ಮೊದಲ ಹೆಂಡತಿಯ ಕುಮಾರರಿಗೆ ಒಳಗೆ ಬೋಧಿಸುವ ಸುಲಭವಾದ ಕಾರ್ಯಗಳನ್ನು ಮಾಡಲು ಹೇಳಿ, ಹೊರಗಿನ ಕಾರ್ಯಗಳನ್ನು ಎರಡನೆ ಹೆಂಡತಿಯ ಕುಮಾರರಿಗೆ ಹೇಳಿದ್ದಾರೆ. **ಆಗಿನಿಂದ ಗುಡಿಯಲ್ಲಿನ ಕಾರ್ಯ, ಗುಡಿ ಹೊರಗಿನ ಕಾರ್ಯ ಎರಡೂ ಬ್ರಾಹ್ಮಣರೇ ಮಾಡುತ್ತಿದ್ದಾರೆ.** ಆದರೆ ಕಾಲಕ್ರಮದಲ್ಲಿ ಗುಡಿಯೊಳಗಿನವರು ಬ್ರಾಹ್ಮಣರಾಗಿ, ಗುಡಿ ಹೊರಗಿನವರು ಮಾತ್ರ ನಾಯಿ ಬ್ರಾಹ್ಮಣರಾಗಿದ್ದಾರೆ. ಈಗಿನ ಬ್ರಾಹ್ಮಣ, ನಾಯಿ ಬ್ರಾಹ್ಮಣ ಇಬ್ಬರೂ ತ್ರೇತಾಯುಗದಲ್ಲಿ ಬ್ರಾಹ್ಮಣ ಸಂತತಿಯೇ ಎಂದು ಈ ದಿನ ತಿಳಿಯದಂತೆಹೋಗಿದೆ. ಆ ದಿನ ತಂದೆ ಮೂಲಕ ಬಂದಿರುವ ಕಾರ್ಯಗಳನ್ನು ಸೋದರ ಬ್ರಾಹ್ಮಣರಾದ ಬ್ರಾಹ್ಮಣ, ನಾಯಿ ಬ್ರಾಹ್ಮಣರು ಇಬ್ಬರು ಕ್ರಮ ತಪ್ಪದೆ ಗುಡಿಯೊಳಗೆ, ಗುಡಿಹೊರಗೆ ಬ್ರಹ್ಮವಿದ್ಯೆಗೆ ಸಂಬಂಧಿಸಿದ ಕೆಲಸವನ್ನು ಮಾಡುತ್ತಲೇ ದ್ವಾಪರಯುಗದ ವರೆಗೂ ಬಂದಿದ್ದಾರೆ. ನಾವು ಅಲ್ಲಿಂದ ವಿವರಿಸಿಕೊಳ್ಳೋಣ.

ಬ್ರಹ್ಮಜ್ಞಾನ ತಿಳಿಸುವವನು ಅಥವಾ ತಿಳಿದವನು ಬ್ರಾಹ್ಮಣನು ಎನ್ನುವ ಮಾತು ಪೂರ್ವದಲ್ಲಿತ್ತು ಎಂದಿದ್ದೇವಲ್ಲವೆ! ಆ ಮಾತಿನ ಪ್ರಕಾರವೇ ಬ್ರಾಹ್ಮಣರು ಬ್ರಹ್ಮಜ್ಞಾನವನ್ನು ಇತರರಿಗೆ ತಿಳಿಸುವ ಕೆಲಸವೇ ಮುಖ್ಯವಾಗಿ ಇಟ್ಟುಕೊಂಡು ಜೀವನಸಾಗಿಸುತ್ತಿದ್ದರು. ಮಾನವ ಜೀವನಧ್ಯೇಯ ಮೋಕ್ಷವನ್ನು ಸಾಧಿಸುವುದೇ ಎಂದು ತಿಳಿಸುತ್ತಿದ್ದರು. ಪುರದಲ್ಲಿ ಜೀವಿಸುವ ಪೌರರಿಗೆ ಜೀವನದಲ್ಲಿ **'ದೈವಪ್ರಾಪ್ತಿಗೋಸ್ಕರ ಹಿತವನ್ನು ಬೋಧಿಸುವವರು ಆದ್ದರಿಂದ ಪೌರೋಹಿತರೆಂದು'** ಸಹ ಇವರನ್ನು ಕರೆಯುವುದು ಇದೆ. ಪೌರರಿಗೆ ಹಿತವನ್ನು ಬೋಧಿಸುತ್ತಾ ಪೌರೋಹಿತರೆಂದು ಹೆಸರುವಾಸಿಯಾದ ಬ್ರಾಹ್ಮಣರು, ಎಲ್ಲರ ತಲೆಯಲ್ಲಿ ದೇವರು ನಿವಾಸವಾಗಿದ್ದಾನೆಂದು, ನಮ್ಮ ತಲೆಯಲ್ಲಿನ ಗುಣಗಳು ಕೆಲಸಮಾಡುವವರೆಗು ದೇವರನ್ನು ತಿಳಿದುಕೊಳ್ಳಲಾರೆವೆಂದು, ಲೆಕ್ಕಿಸಲಾರದ ಗುಣಗಳೊಂದರ

ಆಲೋಚನೆಗಳನ್ನು ಅಡಗಿಸಿಹಾಕಿದಾಗಲೇ, ಶಿರಸ್ಸಿನಲ್ಲಿ ನಿವಾಸವಿರುವ ಆತ್ಮ ಅನುಭವಕ್ಕೆ ಬಂದು ತಿಳಿಯುತ್ತದೆಂದು, ಆತ್ಮ ದರ್ಶನ ಇಲ್ಲದ ಜೀವನ ವ್ಯರ್ಥವೆಂದು ಬೋಧಿಸುತ್ತಿದ್ದರು. ಬ್ರಾಹ್ಮಣರು ಈ ವಿಧವಾಗಿ ಪ್ರಜೆಗಳಿಗೆ ಬೋಧಿಸುತ್ತಾ ಒಳ್ಳೆಯ ಕಾರ್ಯಗಳು ಮಾಡುತ್ತಿರುವಾಗ, ನಾಯಿಬ್ರಾಹ್ಮಣರೆಂದು ಹೆಸರುವಾಸಿಯಾದ ಮಂಗಳರು (ಕ್ಷೌರಿಕರು) ನಿಮಗಿಂತ ನಾವು ಏನು ಕಡಿಮೆ ಇಲ್ಲವೆಂದು, ನೀವು ಆತ್ಮಜ್ಞಾನವನ್ನು ಬೋಧಿಸಿದರೆ ಅದನ್ನು ನಾವು ಅರ್ಥ ವಾಗುವಂತೆ ತೋರಿಸುವವರೆಂದು ಬ್ರಾಹ್ಮಣರಿಗೆ ಪೋಟಿ ಕಾರ್ಯಗಳು ಮಾಡುತ್ತಿದ್ದರು.

ಈ ವಿಧವಾಗಿ ಬ್ರಹ್ಮಜ್ಞಾನವನ್ನು ತಿಳಿಸುವವರು ಎರಡು ಗುಂಪುಗಳಾಗಿ ವಿಭಜಿಸಿಕೊಂಡು ಇರುತ್ತಿದ್ದರು. ಒಂದು ಗುಂಪಿನವರು ಬ್ರಹ್ಮಜ್ಞಾನವನ್ನು ಬಾಯಿ ಮೂಲಕ ಬೋಧಿಸಿದರೆ, ಮತ್ತೊಂದು ಗುಂಪಿನವರು ಬಾಯಿಂದ ಬೋಧಿಸದೆ ಕೈಯಿಂದ ಮಾಡಿ ಅರ್ಥವಾಗುವಂತೆ ಮಾಡುತ್ತಿದ್ದರು. ಬೋಧಿಸುವವರಿಗಿಂತ ತೋರಿಸುವವರು ಹೆಚ್ಚೆಂದು ಕೆಲವರೂ, ತೋರಿಸುವವರಿಗಿಂತ ಬೋಧಿಸುವವರೇ ದೊಡ್ಡವರೆಂದು ಮತ್ತೆ ಕೆಲವರು, ಒಬ್ಬರಿಗೊಬ್ಬರು ವಾದಿಸಿಕೊಳ್ಳುತ್ತಿದ್ದರು. ಯಾವುದು ಏನಾದರೂ ಬ್ರಹ್ಮಜ್ಞಾನ ಯಾವುದೋ ಒಂದು ವಿಧವಾಗಿ ತಿಳಿಸುತ್ತಿದ್ದರು ಆದ್ದರಿಂದ ಎರಡು ಗುಂಪಿನವರಿಗೂ ಸೋದರ ಬ್ರಾಹ್ಮಣರೆಂದು ಹೆಸರು ಇತ್ತು. ಎರಡು ಗುಂಪುಗಳ ಬ್ರಾಹ್ಮಣರು ಅನೇಕ ವಿಷಯಗಳಲ್ಲಿ ಪೋಟಿಬೀಳುತ್ತಾ ಯಾರಿಗೆ ಅವರು ದೊಡ್ಡವರೆಂದುಕೊಳ್ಳುತ್ತಿದ್ದರು. ಆ ವಿಧವಾಗಿಯೇ ಅನೇಕ ಆಲೋಚನೆಗಳು ನಮ್ಮ ತಲೆಯಲ್ಲಿವೆ ಎಂದು, ಆ ಆಲೋಚನೆಗಳನ್ನು ಇಲ್ಲದಂತೆ ಮಾಡಿಕೊಂಡರೆ ಆತ್ಮದರ್ಶನವಾಗುತ್ತದೆಂದು ಬ್ರಾಹ್ಮಣರು ತಿಳಿಸಿದಾಗ, ಅನೇಕ ಆಲೋಚನೆಗಳ ಚಿಹ್ನೆಯೆ ತಲೆಮೇಲೆ ಅನೇಕ ಕೂದಲುಗಳೆಂದು, ಆ ತಲೆಕೂದಲು ಪೂರ್ತಿ ಬೋಳಿಸಿದರೆ **'ಗುಂಡಾಗಿ'** ಬದಲಾಗಿ ಹೊಸ ಆಕಾರ ದರ್ಶನವಾಗುತ್ತದೆಂದು, ಅದೇ ವಿಧವಾಗಿ ಆಲೋಚನೆಗಳು ಇಲ್ಲದ ಸ್ಥಾನದಲ್ಲಿ ಹೊಸದಾಗಿ **'ಆತ್ಮ'** ದರ್ಶನವಾಗುತ್ತದೆಂದು

ಪೂರ್ತಿ ವಿವರವಾಗಿ ಅರ್ಥವಾಗುವಂತೆ, ಒಬ್ಬ ಮನುಷ್ಯನ ತಲೆಮೇಲೆ ಕೂದಲು ಪೂರ್ತಿ ಬೋಳಿಸಿ ತೋರಿಸಿ, ಒಳಗೂ ಸಹ ಆಲೋಚನೆಗಳು ಇಲ್ಲದಂತೆ ಮಾಡಿಕೊಳ್ಳಿರೆಂದು ನಾಯಿಬ್ರಾಹ್ಮಣರು ಮಾಡಿ ತೋರಿಸಿದ್ದಾರೆ.

ಹೀಗೆ ಅನೇಕ ವಿಷಯಗಳಲ್ಲಿ ಬ್ರಾಹ್ಮಣ, ನಾಯಿಬ್ರಾಹ್ಮಣ ಎನ್ನುವ ದಾಯಾದಿ ಗುಂಪುಗಳ ಬ್ರಾಹ್ಮಣರು ಪೋಟಿ ಕಾರ್ಯಗಳು ನಿರ್ವಹಿಸುತ್ತಾ ಇರುತ್ತಿದ್ದರು. ಅವುಗಳಲ್ಲಿ ಕೆಲವನ್ನು ಈಗ ವಿವರಿಸಿಕೊಳ್ಳೋಣ. ಬ್ರಾಹ್ಮಣರು ದೇವಾಲಯದೊಳಗೆ ಹೋಗಿ ಅದರಲ್ಲಿನ ಪ್ರತಿಮೆ ಮುಂದೆ ಪ್ರಾತಃಕಾಲದಲ್ಲಿಯೇ ಬ್ರಹ್ಮವಿದ್ಯಾಪಾರಾಯಣ ಮಾಡುತ್ತಾ, ಅನೇಕ ಶ್ಲೋಕಗಳನ್ನು ಓದುತ್ತಾ, ದೇವರನ್ನು ಆರಾಧಿಸುತ್ತಾ ಪ್ರಜೆಗಳೆಲ್ಲರೂ ದೇವರ ಮಂತ್ರೋಚ್ಚಾಟನೆ ಶಬ್ಧದೊಂದಿಗೆ ಮನಸ್ಸು ಲಗ್ನಮಾಡಿ ಆರಾಧಿಸಬೇಕೆಂದು, ಜ್ಞಾನಮಂತ್ರ ಶಬ್ಧ ದೈವಸಮಾನವೆಂದು ಅಂತಹ ನಾದವೇ **'ಬ್ರಹ್ಮವೆಂದು'** ಬೋಧಿಸಿದಾಗ, ನಾಯಿ ಬ್ರಾಹ್ಮಣರು ಜ್ಞಾನಮಂತ್ರ ಶಬ್ಧಕ್ಕಿಂತ ಉತ್ತಮವಾದ ನಾದವು ಬೇರೆ ಇದೆಯೆಂದು, ಜ್ಞಾನವಮಂತ್ರನಾದಕ್ಕಿಂತ ತಾವು ಮೊಳಗಿಸುವ ನಾದ ಬಹಳ ಮಂಗಳಕರವಾದುದೆಂದು ಹೇಳುತ್ತಿದ್ದರು. ಮಂಗಳವಾದ್ಯಗಳಿಂದ ಹುಟ್ಟುವ ನಾದಗಳಲ್ಲಿ ಮನಸ್ಸು ಲಗ್ನವಾದರೂ, ನಿತ್ಯವೂ ನಮ್ಮನ್ನು ಪೀಡಿಸುವ ಅನೇಕ ವಿಷಯಗಳನ್ನು ಮರೆತುಹೋಗಿ ಉತ್ತಮ ಅನುಭೂತಿಯನ್ನು ಮಾನವನು ಪಡೆಯುತ್ತಾನೆಂದು, ಅದು ದೇವರಿಗೆ ಬಹಳ ಹತ್ತಿರವಾದುದೆಂದು, ಪ್ರಪಂಚ ವಿಷಯಗಳಿಂದ ಸುಲಭವಾಗಿ ಹೊರಬೀಳುವುದಕ್ಕೆ ಮಂತ್ರನಾದಕ್ಕಿಂತ ನಮ್ಮನಾದವೇ ಮೇಲೆಂದು ಬಾರಿಸಿ, ಮನುಷ್ಯರ ಮನಸ್ಸುಗಳನ್ನು ಆ ನಾದದ ಮೇಲೆಯೇ ನಿಲ್ಲುವಂತೆ ಹೊಸನಾದಗಳನ್ನು ಮೊಳಗಿಸಿ ತೋರಿಸಿದ್ದಾರೆ. ಹಾಗೆ ಮಾಡುವುದರಿಂದ ಆಲೋಚನೆಗಳು ಇಲ್ಲದಂತೆಹೋಗಿ ಹೊಸದಾಗಿ ಆತ್ಮ ದರ್ಶನವಾಗುತ್ತದೆಂದು ಆ ಅರ್ಥದಿಂದಲೇ ಮನುಷ್ಯರ ತಲೆಕೂದಲು ಬೋಳಿಸಿ ತೋರಿಸಿದ್ದಾರೆ. ಬೋಳಿಸುವುದಕ್ಕೆ ಬೇಕಾದ ಪರಿಕರಗಳು, ಶಬ್ದ ಮಾಡುವುದಕ್ಕೆ ಬೇಕಾದ ವಾದ್ಯಗಳು ಅಂದಿನಿಂದಲೇ ಸಂಗ್ರಹಿಸಿ ಇಟ್ಟುಕೊಂಡಿದ್ದಾರೆ.

ಗುಡಿಯೊಳಗೆ ನೀವು ಮಂತ್ರ ಓದಿದರೆ, ಗುಡಿ ಹೊರಗೆ ನಾವು ವಾದ್ಯಗಳು ಮೊಳಗಿಸುತ್ತೇವೆಂದು ಪೋಟಿಗೆ ಕುಳಿತುಕೊಂಡಿದ್ದಾರೆ. ಹಾಗೇ ವಿವಾಹ ಸಮಯದಲ್ಲಿ ಬ್ರಾಹ್ಮಣರು ಮಂತ್ರಗಳು ಓದಿದರೆ, ನಾಯಿಬ್ರಾಹ್ಮಣರು ವಾದ್ಯಗಳನ್ನು ಮೊಳಗಿಸುತ್ತಿದ್ದರು. ಮದುವೆ ನೀವು ಮಾಡಿದರೆ, ಮಧುಮಗನನ್ನಾಗಿ ಮಾಡುವುದು ನಾವೇ ಎಂದು, ನಾವು ಇಲ್ಲದೇ ಮದು ಮಗನೇ ಇಲ್ಲ ಎಂದು ಅಂದಿದ್ದಾರೆ. ಈಗಲೂ ನಾಯಿ ಬ್ರಾಹ್ಮಣರು ಮಧುಮಗನನ್ನು ಮಾಡುವುದು ಇದೆ. ಆ ವಿಧವಾಗಿಯೇ ಒಬ್ಬ ಮನುಷ್ಯ ಮರಣಿಸಿದಾಗ ಬ್ರಾಹ್ಮಣರು ಮಂತ್ರಗಳು ಓದಿ ಕರ್ಮತಂತ್ರ ನಿರ್ವಹಿಸಿ ಮರಣಿಸಿದ ಮನುಷ್ಯನಿಗೂ ಬದುಕಿರುವ ಅವರಿಗೂ ಇಲ್ಲಿಗೆ ಸಂಬಂಧ ಕಿತ್ತು ಹೋಗಿದೆ, ಇಲ್ಲಿಯವರೆಗೂ ಇಲ್ಲಿಯೇ ತಿರುಗುತ್ತಿರುವ ಜೀವಾತ್ಮ ಆ ದಿನದಿಂದ ಪೂರ್ತಿ ಸಂಬಂಧ ಇಲ್ಲದಂತೆ ಹೋಗುತ್ತದೆಯೆಂದು ತಿಳಿಸಿದಾಗ, ನಾಯಿಬ್ರಾಹ್ಮಣರು ಬದುಕಿರುವವರಿಗೆ ಗಡ್ಡ ಬೆಳೆಸಿಕೊಳ್ಳಿರೆಂದು ಆ ದಿನ ಅವುಗಳನ್ನು ಬೋಳಿಸಿ ಇಲ್ಲಿಯವರೆಗು ನಿಮಗೆ ಅಂಟಿಕೊಂಡಿರುವ ಗಡ್ಡದ ಕೂದಲು, ತಲೆಕೂದಲು ಹೇಗೆ ಈಗ ಸಂಬಂಧ ವಿಲ್ಲದಂತೆ ಹೋಗಿವೆಯೋ, ಹಾಗೆಯೇ ಮರಣಿಸಿದವರ ಜೀವಾತ್ಮ ಇಂದಿನಿಂದ ನಿಮ್ಮಜೊತೆ ಸಂಬಂಧ ಇಲ್ಲದಂತೆ ಹೋಗುತ್ತದೆಂದು ತಿಳಿಸುತ್ತಾ ಕರ್ಮ ತಂತ್ರಗಳು ಮಾಡುತ್ತಿದ್ದರು. ಹೀಗೆ ಬ್ರಾಹ್ಮಣರ ಕಾರ್ಯ ಇರುವ ಕಡೆಯೆಲ್ಲಾ ದಾಯಾದಿಗಳಾದ ನಾಯಿ ಬ್ರಾಹ್ಮಣರ ಕಾರ್ಯ ಇದೆ ಎಂದು ತಿಳಿಯಬೇಕು.

ಅನೇಕ ಕಡೆ ಸ್ಪರ್ದೆಗಿಳಿದ ಎರಡು ಗುಂಪುಗಳ ಬ್ರಾಹ್ಮಣರು ತಮ್ಮ ತಮ್ಮ ಅಧಿಪತ್ಯವನ್ನು ಸಾರಿಕೊಳ್ಳುತ್ತಾ, ಒಂದು ಗುಂಪಾದ ಬ್ರಾಹ್ಮಣರು ನಾವು **'ಭೂಸುರರೆಂದು'** ಸಾರಿಕೊಂಡರು. ಭೂಮಿಮೇಲೆ ಪ್ರತ್ಯಕ್ಷ ದೇವತೆಗಳೆಂದು ಬ್ರಾಹ್ಮಣರು ಸಾರಿಕೊಂಡಾಗ, ಎರಡನೇ ಗುಂಪಾದ ನಾಯಿಬ್ರಾಹ್ಮಣರು ನಾವು ಬ್ರಾಹ್ಮಣರಿಗಿಂತ ಶುಭಕರವಾದವರೆಂದು ಮಂಗಳ ಪ್ರದವಾದ ನಾವು ಮಂಗಳರೆಂದು (ಶುಭಕರವಾದವರೆಂದು) ಪ್ರಕಟಿಸಿಕೊಂಡರು. ಮೊದಲು ಎರಡು

ಗುಂಪಿನವರಿಗೂ ಬ್ರಾಹ್ಮಣರೆಂದು ಹೆಸರಿತ್ತು. ನಾಯಿಬ್ರಾಹ್ಮಣರೆಂಬ ಹೆಸರು ಮಧ್ಯದಲ್ಲಿ ಮಂಗಳಕರವಾದವರಿಗೆ ಬಂದಿದೆ, ಆದರೆ ಮೊದಲು ಇರುತ್ತಿರಲಿಲ್ಲ. ಪೂರ್ವಕಾಲದಲ್ಲಿಯೇ ಬ್ರಾಹ್ಮಣರ ಮಧ್ಯದಲ್ಲಿ ಭೇದಾಭಿಪ್ರಾಯಗಳು ಬಂದಾಗ **'ಭೂಸುರರೆಂದು' ಒಂದು ಗುಂಪಿಗೆ 'ಮಂಗಳರೆಂದು'** ಒಂದು ಗುಂಪಿಗೆ ಹೆಸರು ಬಂದಿದೆ. ಮಂಗಳರೆಂಬ ಹೆಸರು ಒಂದು ಗುಂಪಿಗೆ ಹಾಗೇ ನಿಂತುಹೋಗಿ, ಭೂಸುರರೆಂಬ ಹೆಸರು ಮತ್ತೊಂದು ಗುಂಪಿಗೆ ಅಷ್ಟಾಗಿ ಪ್ರಚಾರವಾಗದೆ ಬ್ರಾಹ್ಮಣರೆಂಬ ಹೆಸರಾಗಿಯೇ ನಿಂತುಹೋಗಿದೆ. ನೀನಾ ನಾನಾ ದೊಡ್ಡವನೆಂದು ಪೋಟಿಬಿಳುತ್ತಾ ಬಂದಿರುವ ಎರಡು ಗುಂಪುಗಳ ಬ್ರಾಹ್ಮಣರು ಒಬ್ಬರಿಗೊಬ್ಬರು ದ್ವೇಷಿಸಿಕೊಳ್ಳುವವರೆಗೂ ಬಂದು, ಯಾರಾದರೂ ಕಾರ್ಯನಿಮಿತ್ತವಾಗಿ ಹೋಗುವಾಗ ಮಂಗಳರು (ಕ್ಷೌರಿಕರು) ಎದುರಾದರೆ ಅಪಶಕುನವೆಂದು, ಆ ಕಾರ್ಯ ಭಂಗವಾಗಿಹೋಗುತ್ತದೆಂದು, ಮಂಗಳರನ್ನು ಅಮಂಗಳರನ್ನಾಗಿ ಬ್ರಾಹ್ಮಣರು ಹೇಳಿ ಪ್ರಚಾರ ಮಾಡಿದರು. ಅದನ್ನು ನೋಡಿದ ಮಂಗಳಬ್ರಾಹ್ಮಣರು ಅದೇ ವಿಧವಾದ ಅಪವಾದವನ್ನು ಬ್ರಾಹ್ಮಣರಿಗೆ ಹೊರಸಬೇಕೆಂದು ತಿಳಿದು, ಯಾರಾದರೂ ಕಾರ್ಯನಿಮಿತ್ತವಾಗಿ ಹೋಗುವಾಗ ಬ್ರಾಹ್ಮಣನು ಎದುರಾದರೆ ಅಪಶಕುನವೆಂದು, ಆ ಕಾರ್ಯ ಭಂಗವಾಗಿಹೋಗುತ್ತದೆಂದು, ಪ್ರಚಾರ ಮಾಡಿದರು. ಅಪಶಕುನಗಳಲ್ಲಿ ಇಂದಿಗೂ ಅವು ಪ್ರಚಾರದಲ್ಲಿ ಇವೆ.

ಹೀಗೆ ಕಾಲ ಕಳೆಯುತ್ತಾ ಬಂದು ಹಳಬರು ಹೋಗುತ್ತಾ ಹೊಸಬರು ಬರುತ್ತಾ ಪೂರ್ವದಲ್ಲಿರುವ ಅಭಿಪ್ರಾಯಗಳು ಬದಲಾಗಿಹೋಗಿ ಅವರ ಹಿರಿಯರು ಏನು ಮಾಡಿದ್ದಾರೋ, ಪೂರ್ವದಲ್ಲಿದ್ದ ಪದ್ಧತಿಗಳೇನೋ ತಿಳಿಯದೆ, ಬ್ರಾಹ್ಮಣರು ಬ್ರಹ್ಮಜ್ಞಾನವನ್ನು ಬಿಟ್ಟು ಕೇವಲ ಬದುಕುವುದಕ್ಕೋಸ್ಕರವೇ ಎನ್ನುವಂತೆ ಆಲಯಗಳಲ್ಲಿ ಆರಾಧನೆ ಮೊದಲುಗೊಂಡು, ಸತ್ತವರ ಕರ್ಮ ತಂತ್ರಗಳವರೆಗೂ ಮಾಡುತ್ತಿದ್ದಾರೆ. ಅಂದಿಗೂ ಇಂದಿಗೂ ಅವರು ಮಾಡುವ ಕೆಲಸಗಳಲ್ಲಿ ಸಹ ಬದಲಾವಣೆಗಳು ಮಾಡಿಕೊಂಡಿದ್ದಾರೆ. ಬ್ರಾಹ್ಮಣರು ಬ್ರಹ್ಮಜ್ಞಾನವನ್ನು ಬಿಟ್ಟು ವೇದಮಂತ್ರಗಳಲ್ಲಿ ಬಿದ್ದಿದ್ದಾರೆ. ಹಾಗೇ ಮಂಗಳರಲ್ಲಿ ಸಹ ಅರ್ಥಗಳು ತಿಳಿಯದ

ಆಚಾರಗಳು ಉಳಿದುಹೋಗಿವೆ. ಅವರು ಮೊದಲು ಮಾಡುತ್ತಿದ್ದ ಕೆಲಸಗಳೇ ಈ ದಿನ ಮಾಡುತ್ತಿದ್ದರೂ ಅಂದಿನ ಕೆಲಸಗಳು ಭಾವಯುಕ್ತವಾಗಿರುತ್ತಿದ್ದವು. ಈ ದಿನ ಭಾವರಹಿತವಾಗಿ ಕೇವಲ ವೃತ್ತಿ ವಿದ್ಯೆ ಎನ್ನುವಂತಿವೆ. ಹೀಗೆ ಎರಡು ಗುಂಪಿನವರು ದಾರಿತಪ್ಪಿ ಹಳೆ ವಿಧಾನವನ್ನು, ಅರ್ಥವನ್ನು ಬಿಟ್ಟು ಕೆಲಸಗಳು ಮಾಡುತ್ತಿದ್ದಾರೆ.

ಪೂರ್ವಕಾಲದಲ್ಲಿ ಬ್ರಾಹ್ಮಣರು ಮಂಗಳರು (ಕ್ಷೌರಿಕರು) ಸಮಾನವಾಗಿ ಒಬ್ಬರಿಗೊಬ್ಬರು ಪೋಟಿಬೀಳುತ್ತಾ ಬಂದರೂ, ಸ್ವಲ್ಪಕಾಲಕ್ಕೆ ಮಂಗಳರೇ ಹೆಚ್ಚಾಗಿ ಪ್ರಚಾರದೊಳಗೆ ಬಂದು, ಅವರದ್ದೇ ರಾಜರ ಹತ್ತಿರವೂ, ಪ್ರಜೆಗಳ ಹತ್ತಿರವೂ ಮೇಲ್ಗೈಯಾಗಿ ಬದಲಾಗಿದೆ. ಅದನ್ನು ನೋಡಿದ ಬ್ರಾಹ್ಮಣರು ಪಟ್ಟುಹಿಡಿದು ಮಂಗಳರನ್ನು ಕೆಳಗೆ ಕಳುಹಿಸಿ ತಾವು ಮೇಲಕ್ಕೆ ಬರಬೇಕೆಂದುಕೊಂಡು ಬುದ್ಧಿಯನ್ನು ಉಪಯೋಗಿಸಿ ಅದಕ್ಕೆ ತಕ್ಕ ಉಪಾಯವನ್ನು ಯೋಚಿಸಿದರು. ತಾವು ಸಹ  ರಾಜರಜೊತೆ ಸ್ನೇಹ ಮಾಡಿ, ಅಧಿಕಾರವನ್ನು ತಮ್ಮಕಡೆ ಉಪಯೋಗಿಸಿಕೊಂಡು ತಮ್ಮ ಪ್ರಾಬಲ್ಯವನ್ನು ಸಂಪಾದಿಸಿಕೊಳ್ಳಬೇ ಕೆಂದು ಕೊಂಡರು. ಅಂದಿನಿಂದ ಹೆಚ್ಚಾಗಿ ರಾಜರ ಸಾನ್ನಿಧ್ಯದಲ್ಲಿ ಸೇರಿ, ಅವರಿಗೆ ಅನೇಕ ವಿಷಯಗಳು ಬೋಧಿಸುತ್ತಾ, ರಾಜರ ಹತ್ತಿರ ಆಸನವನ್ನು ಸಂಪಾದಿಸಿ ರಾಜಗುರುಗಳ ಗೌರವ ಹೊಂದಿ ಚಲಾವಣೆ ಆಗುತ್ತಾ, 'ಮಂಗಳರಿ' ಗಿಂತ ಹೆಚ್ಚಿನ ಪ್ರಾಬಲ್ಯವನ್ನು ಎಲ್ಲಾ ವಿಧಗಳ ದೊಡ್ಡ ಸ್ಥಾನವನ್ನು ಸಂಪಾದಿಸಿಕೊಂಡರು. ಯಾವ ಪಥಕ ಇಲ್ಲದಂತೆ ಸಾಧಾರಣವಾಗಿ ತಮ್ಮ ಕೆಲಸಗಳು ಮಾಡುತ್ತಾ ಬಂದು ಸ್ವಲ್ಪಕಾಲಕ್ಕೆ ತಾವು ಬ್ರಾಹ್ಮಣರಿಗಿಂತ ಬಹಳ ಕಡಿಮೆಯವರಾಗಿ ಇರುವಂತೆ, ತಮಗಿಂತ ಅವರು ಎಷ್ಟೋ  ಪಟ್ಟು ಹೆಚ್ಚಾಗಿರುವಂತೆ  ಮಂಗಳರು ತಿಳಿದುಕೊಂಡರು. ತಾವು ಹೇಗಾದರು ಬ್ರಾಹ್ಮಣರಿಗೆ ಸಮಾನವಾಗಿರಬೇಕೆಂದು ತಿಳಿದು, ತಾವು ಸಹ ಅವರಂತೆ ರಾಜರ ಹತ್ತಿರವೇ ಸ್ಥಾನ ಸಂಪಾದಿಸಿ ಕೊಳ್ಳಬೇಕೆಂದು ಯೋಚಿಸಿದರು. ಒಂದುದಿನ ಶ್ರೀಕೃಷ್ಣದೇವ ರಾಯರ ಆಸ್ಥಾನದಲ್ಲಿ ಮಂಗಳನು ಒಬ್ಬನು "ನಾವು ಸಹ ಒಂದುಕಾಲದಲ್ಲಿ ಬ್ರಾಹ್ಮಣರೆ, ನಮಗೂ

ಸಹ ಬ್ರಾಹ್ಮಣರ ಸ್ಥಾನ ಕಲ್ಪಿಸಿ ಆದರಿಸಬೇಕೆಂದು" ಶ್ರೀಕೃಷ್ಣದೇವರಾಯರನ್ನು ಕೋರಿದಾಗ ಆಗ ಅವರ ಪೂರ್ವ ವಿಚಾರಗಳು ತಿಳಿಯದ ರಾಯರು, ಬ್ರಾಹ್ಮಣರನ್ನು ನೋಡಿ ಈತನನ್ನು ಸಹ ಬ್ರಾಹ್ಮಣನನ್ನಾಗಿ ಮಾಡೆಂದನಂತೆ. ಆಗ ಅವರು ರಾಯರ ಆಜ್ಞೆಯ ಪ್ರಕಾರ ಆತನನ್ನು ತುಂಗಭದ್ರಾನದಿಗೆ ತೆಗೆದುಕೊಂಡುಹೋಗಿ ಮಂತ್ರಗಳು ಓದುತ್ತಾ, ನೀರನ್ನು ಒಯ್ಯುತ್ತಾ ಇಂದಿಗೆ ನೀಚತ್ವ ಹೋಗಿ ಬ್ರಾಹ್ಮಣತ್ವ ಬರಬೇಕೆಂದು ಸಂಸ್ಕೃತದಲ್ಲಿ ಮಂತ್ರಗಳನ್ನು ಹೇಳುತ್ತಿದ್ದರಂತೆ. ಆ ವಿಷಯ ಬ್ರಾಹ್ಮಣರ ಕುಲಸ್ಥನಾದ ತೆನಾಲಿ ರಾಮಕೃಷ್ಣನಿಗೆ ತಿಳಿಯಿತು. '**ಮಂಗಳರು** ನಮಗೆ ಸಾಟಿನಾ?' ಎಂದು ಆಗ್ರಹಿಸಿದ ರಾಮಕೃಷ್ಣನು ಆ ಕಾರ್ಯವನ್ನು ಭಂಗ ಮಾಡುವುದಕ್ಕೆ ಯೋಚಿಸಿ, ಒಂದು 'ನಾಯಿ'ಯನ್ನು ತನ್ನ ಹಿಂದೆ ಇಟ್ಟುಕೊಂಡು ತಾನು ಸಹ ತುಂಗಭದ್ರಾನದಿಗೆ ಹೋದನು. ಅಲ್ಲಿ ನಡೆಯುತ್ತಿರುವ ತತಂಗವನ್ನು ನೋಡಿ, ತಾನು ಅವರಿಗಿಂತ ಕೆಲವು ಗಜಗಳ ಮೇಲ್ಭಾಗಕ್ಕೆ ಹೋಗಿ, ನಾಯಿ ಕತ್ತಿನಲ್ಲಿ ಹಗ್ಗವನ್ನು ಕಟ್ಟಿ ಹಗ್ಗವನ್ನು ಕಾಲಿನ ಕೆಳಗೆ ಅದಿಮಿಟ್ಟುಕೊಂಡು ತಾನು ಮಂತ್ರಗಳು ಹೇಳುತ್ತಾ, ಈ ನಾಯಿ ಕಾಮಧೇನಾ (ಹಸುವಾ) ಗಿ ಬದಲಾಗಬೇಕೆಂದು ಹೇಳುತ್ತಾ ನಾಯಿಯ ಮುಖದ ಮೇಲೆ ನೀರು ಚೆಲ್ಲುತ್ತಿದ್ದನಂತೆ. ಆಗ ಆ ನಾಯಿಗೆ ನೀರು ತಾಕುವುದರಿಂದ ಸಹಿಸಿಕೊಳ್ಳಲಾರದೆ ಕಿರುಚುತ್ತಾ ನೀರಿನಲ್ಲಿ ಎಗರುವುದಕ್ಕೆ ಪ್ರಾರಂಭಿಸಿತು. ನೀರು ಬೀಳುವುದು ಮೇಲ್ಭಾಗದಲ್ಲಿ ಇರುವುದರಿಂದ ನಾಯಿ ತುಳಿದ ನೀರು ಉಳಿದ ಬ್ರಾಹ್ಮಣರಕಡೆ ಬರುತ್ತಿದ್ದವು. ಮೇಲಾಗಿ ನಾಯಿ ಅಲ್ಲಿ ಅರಚುವುದು, ನೀರು ಎಲ್ಲವೂ ಕೊಳೆಯಾಗುವುದು ಅವರಿಗೆ ಸರಿಹೋಗದೆ ರಾಮಕೃಷ್ಣನನ್ನು ದೂರವಾಗಿ ಹೋಗೆಂದು, ನಿನ್ನಿಂದ ನಮ್ಮ ಕಾರ್ಯ ಕೆಟ್ಟುಹೋಗುತ್ತಿದೆಯೆಂದು, ನಾಯಿ ಶರೀರದ ಮೇಲೆ ಬಿದ್ದಿರುವ ನೀರು ತಮ್ಮಕಡೆ ಹರಿಯುತ್ತಿದೆಯೆಂದು, ಎಷ್ಟು ಹೇಳಿದರೂ ರಾಮಕೃಷ್ಣ ಕೇಳಲಿಲ್ಲ. ಮೇಲಾಗಿ ತೆನಾಲಿ ರಾಮಕೃಷ್ಣನೇ ಅವರ ಮೇಲೆ ವಾದನೆಗೆ ಇಳಿದನು. ಆಗ ಮಾಡುವುದೇನಿಲ್ಲದೆ ಆ ವಿಷಯವನ್ನು ರಾಜರಿಗೆ ತಿಳಿಸಿ ನಮ್ಮ ಕಾರ್ಯ ರಾಮಕೃಷ್ಣನಿಂದ ಭಂಗವಾಗಿದೆ ಎಂದರು. ಆಗ ರಾಯರು ರಾಮಕೃಷ್ಣ ಮಾಡಿದ ಕೆಲಸಕ್ಕೆ ಆಗ್ರಹಿಸಿ ಸಭೆಯೊಳಗೆ ಆತನನ್ನು

ಕರೆಸಿದನು. ನಾನು ಮಂಗಳನನ್ನು ಬ್ರಾಹ್ಮಣನಾಗಿ ಮಾಡೆಂದು ಹೇಳಿದಾಗ ಅವರ ಕೆಲಸಕ್ಕೆ ಏಕೆ ಅಡ್ಡ ಹೋಗಿದ್ದೀಯಾ ಎಂದು ರಾಮಕೃಷ್ಣನನ್ನು ದಂಡಿಸಿದನು. ಆಗ ರಾಮಕೃಷ್ಣನು ವಿನಯವಾಗಿ ನಾಯಿಯನ್ನು ಹಸುವಾಗಿ ಮಾಡಬೇಕೆಂದು ಅಲ್ಲಿಗೆ ಹೋಗಿ ನಾಯಿಯನ್ನು ಮಂತ್ರೋದಕದಿಂದ ಶುದ್ಧಿ ಮಾಡುತ್ತಿದ್ದೆನು. ಅವರಿಗೆ ನಾನೇನು ಅಡ್ಡ ಬರದೆ ನನ್ನ ಕೆಲಸವನ್ನು ನಾನು ಮಾಡಿಕೊಳ್ಳುತ್ತಿದ್ದೇನೆಂದನು. ಆ ಮಾತು ಕೇಳಿದ ರಾಯರು ಆಶ್ಚರ್ಯಪಟ್ಟು ಮಂತ್ರೋದಕದಿಂದ ಶುದ್ಧಿ ಮಾಡಿದರೆ ನಾಯಿ ಗೋವಿನಂತೆ ಹೇಗೆ ಬದಲಾಗುತ್ತದೆ? ಎಂದು ಕೇಳಿದನು. ಅದಕ್ಕೆ ರಾಮಕೃಷ್ಣ ಜಾಣ್ಮೆಯಿಂದ "ಮಂತ್ರೋದಕದಿಂದ ಶುದ್ದಿ ಮಾಡಿದರೆ **'ಮಂಗಳನು' ಬ್ರಾಹ್ಮಣನಾಗಿ** ಹೇಗೆ ಬದಲಾಗುತ್ತಾನೋ, ಹಾಗೆ ನಾಯಿ ಸಹ ಬದಲಾಗುತ್ತದೆಂದು" ಸಮಾಧಾನ ಹೇಳಿದನು. ರಾಯರು ವಿಚಿತ್ರವಾಗಿ ನೋಡುತ್ತಾ "ಏನು ಮಾಡಿದರೂ ನಾಯಿ ಹಸುವಾಗಿ ಬದಲಾಗುವುದು ಅಸಂಭವ" ಎಂದನು. ತಕ್ಷಣ ರಾಮಕೃಷ್ಣ "ಆದರೆ ಏನು ಮಾಡಿದರೂ ಮಂಗಳನು ಬ್ರಾಹ್ಮಣನಾಗಿ ಬದಲಾಗುವುದು ಅಸಂಭವ" ಎಂದು ಸಮಾಧಾನ ಹೇಳಿದ್ದಾನೆ. ರಾಮಕೃಷ್ಣನೊಂದರ ವಾಕ್ ಚಾತುರ್ಯಕ್ಕೆ ರಾಯರು ಮೆಚ್ಚಿಕೊಂಡು ನಾನು ಮಂಗಳನಿಗೆ ಕೊಟ್ಟಿರುವ ಮಾತು ಏನಾಗಬೇಕೆಂದಾಗ, ಅದಕ್ಕೆ ರಾಮಕೃಷ್ಣನು ಮಾರ್ಗ ಯೋಚಿಸಿ ರಾಜರಿಗೆ ಸಂತೋಷ ಆಗುವಂತೆ "ಪ್ರಭೂ! ಮಂಗಳನನ್ನು ಬ್ರಾಹ್ಮಣನಾಗಿ ಬದಲಾಯಿಸುತ್ತೇನೆಂದು ತಾವು ಮಾತು ಕೊಟ್ಟಿದ್ದೀರಾ. ಹಾಗೆ ಬದಲಾಗುವುದಕ್ಕೆ ನನ್ನ ನಾಯಿ ಅಡ್ಡಬಂದ ಮಾತು ನಿಜವೇ. ರಾಜರ ಮಾತು ವ್ಯರ್ಥವಾಗದಂತೆ ಇರುವುದಕ್ಕೆ ನಾಯಿ ಕಾರಣದಿಂದ ಆ ಕಾರ್ಯ ನಿಂತುಹೋಗಿದೆ ಆದ್ದರಿಂದ, ಇಂದಿನಿಂದ ಮಂಗಳನನ್ನು **'ನಾಯಿಬ್ರಾಹ್ಮಣ'** ಎಂದು ಕರೆಯುವಂತೆ ಊರೂರು ಡಂಗೂರ ಹಾಕಿಸಬೇಕೆಂದು ನನ್ನ ಮನವಿ. ಮಂಗಳನು ಬ್ರಾಹ್ಮಣನಾಗಿ ಬದಲಾಗುವುದಕ್ಕೆ ನಾಯಿಅಡ್ಡ ಬಂದಿರುವ ಕಾರಣದಿಂದ ನಾಯಿಬ್ರಾಹ್ಮಣ ಎಂದು ಇಂತಹ ರಾಯರ ಕಾಲದಲ್ಲಿ ಈ ಕಾರ್ಯ ನಡೆದು ಈ ಹೆಸರು

ಬಂದಿದೆಯೆಂದು ತಮ್ಮ ಹೆಸರು ಸ್ಥಿರವಾಗಿ ಇರುವಂತೆ ಇದೇ ತಕ್ಕ ಹೆಸರು" ಎಂದು ಹೇಳಿದನು. ರಾಮಕೃಷ್ಣನ ತಿಳುವಳಿಕೆಗೆ ಸಂತೋಷಿಸಿದ ರಾಯರು ಅಂದಿನಿಂದ ಮಂಗಳನನ್ನು ನಾಯಿ ಬ್ರಾಹ್ಮಣನಾಗಿ ಕರೆಯುವಂತೆ ಡಂಗೂರ ಹೊಡೆಸಿದನು. ಹೀಗೆ ಪೂರ್ವದಿಂದ ನಾಯಿಬ್ರಾಹ್ಮಣ ಎನ್ನುವ ಹೆಸರು ಇಲ್ಲದಿದ್ದರೂ, ರಾಯರ ಕಾಲದಿಂದ ಕ್ರೀ.ಶ. 1600 ವರ್ಷಗಳಿಂದ ಆ ಹೆಸರು ಮಂಗಳರಿಗೆ ಬಂದಿದೆ.

ಪೂರ್ವದಲ್ಲಿ ವಾಸ್ತವಕ್ಕೆ ಬ್ರಾಹ್ಮಣರೆ ಆದರೂ, ಆಚಾರ ವ್ಯವಹಾರಗಳಲ್ಲಿ ಬೇರೆಯಾಗಿ ಮತ್ತೊಂದು ಗುಂಪಾಗಿ ಬದಲಾದ ಅವರು ಈ ದಿನ ಮಂಗಳರಾಗಿ ಕರೆಯಲ್ಪಟ್ಟರೂ, ನಾಯಿಬ್ರಾಹ್ಮಣ ಎನ್ನುವ ಹೆಸರು ಅಂಟಿಸಲ್ಪಟ್ಟಿದೆ. ರಾಯರ ಆಸ್ಥಾನ ಹಂಪಿ. ಹಂಪಿ ಈ ದಿನ ಕರ್ನಾಟಕದಲ್ಲಿ ಇದೆ. ಆ ದಿನ ಹಂಪಿಯು ಸಹ ಆಂಧ್ರದಲ್ಲಿಯೇ ಇತ್ತು. ಆಗ ಕನ್ನಡ ಭಾಷೆ ಸ್ವಲ್ಪ ಹಂಪಿಯಲ್ಲಿ ಇತ್ತು. ಈ ದಿನ ಬ್ರಾಹ್ಮಣರು ಸಂಘದಲ್ಲಿ ಗೌರವವಾಗಿ ಇದ್ದರೆ, ನಾಯಿಬ್ರಾಹ್ಮಣರು ಅವರಿಗಿಂತ ಕಡಿಮೆಯವರಾಗಿದ್ದಾರೆ. ಇದೆಲ್ಲವೂ ಕಾಲಕ್ರಮದಲ್ಲಿ ಬದಲಾದ ವಿಚಿತ್ರವೆಂದು ತಿಳಿಯಬೇಕು. ಆದರೆ ಪ್ರಜೆಗಳಿಗೇನೋ ಹಣ ತೆಗೆದುಕೊಂಡರೂ ಪ್ರತಿಫಲವಾಗಿ ಕೈಗಳ ರೂಪದಲ್ಲಿ ಉಪಯೋಗಪಡುವ ಅವರು ನಾಯಿ ಬ್ರಾಹ್ಮಣರೆಂದು, ಕೇವಲ ಮಾತುಗಳು ಹೇಳಿ ಸರಿಮಾಡುವವರು ಬ್ರಾಹ್ಮಣರೆಂದು ಪ್ರಜೆಗಳು ಅಂದುಕೊಳ್ಳುತ್ತಿದ್ದಾರೆ.

ಅದೇ ವಿಷಯವನ್ನೇ ವೇಮನಯೋಗಿ ಕೂಡಾ ತನ್ನ ಪದ್ಯದಲ್ಲಿ ಮಂತ್ರಜಲಕ್ಕಿಂತ ಮಂಗಳಜಲ ಹೆಚ್ಚು ಎಂದಿದ್ದಾನೆ. ಬ್ರಾಹ್ಮಣನು ಹಣ ತೆಗೆದುಕೊಂಡು ಮಂತ್ರದ ನೀರನ್ನು ತಲೆಮೇಲೆ ಚೆಲ್ಲಿದರೆ ಅದರಿಂದ ಸುಖ ಕಾಣಿಸುವುದಿಲ್ಲ. ಅದೇ ಹಣ ತೆಗೆದುಕೊಂಡು ತಲೆಬೋಳಿಸುವುದಕ್ಕೆ ಕ್ಷೌರಿಕನು ನೀರು ಚೆಲ್ಲಿ ತಲೆಮೇಲೆ ಕೈ ಹಿಡುತ್ತಲೇ ಎಷ್ಟೋ ಹಾಯಾಗಿರುತ್ತದೆ. ಆದ್ದರಿಂದಲೇ ವೇಮನ ಹಾಗೆ ಹೇಳಿದ್ದಾನೆ. ಈ ದಿನ ಸಮಾಜದಲ್ಲಿ ಬ್ರಾಹ್ಮಣರಿಗಿಂತ ಮಂಗಳರೇ ಹೆಚ್ಚಾಗಿ ಉಪಯೋಗಪಡುತ್ತಿದ್ದಾರೆ. ಆದರೂ ಪೂರ್ವ ವಿಚಾರಗಳು

ತಿಳಿಯದಿರುವುದರಿಂದ ಬ್ರಾಹ್ಮಣರು, ಮಂಗಳರು ಒಂದೇ ಜಾತಿಯೆಂದು ತಿಳಿಯದಂತೆ ಹೋಗಿದೆ. ತಮ್ಮ ವಿಷಯ ತಮಗೇ ತಿಳಿಯದ ಮಂಗಳರು ಈಗ ಇದ್ದಾರೆ. ಬ್ರಾಹ್ಮಣ ಎನ್ನುವ ಹೆಸರಿಗಿಂತ ಮಂಗಳ ಎನ್ನುವ ಹೆಸರು ದೊಡ್ಡದೆಂದು ತಿಳಿಯದ ಕ್ಷೌರಿಕರು ಈ ದಿನ ಇದ್ದಾರೆ. ಬ್ರಾಹ್ಮಣ ಎಂದರೆ ಕೇವಲ ಜ್ಞಾನವೆಂದು, ಮಂಗಳ ಎಂದರೆ ಮೋಕ್ಷವೆಂದು, ಜ್ಞಾನವು ಮಾರ್ಗವಾದರೆ, ಗಮ್ಯ ಮೋಕ್ಷವೆಂದು ತಿಳಿಯದ ಮಂಗಳರು ಈ ದಿನ ಇದ್ದಾರೆ. ಪ್ರಪಂಚದಲ್ಲಿಯೇ ಅತ್ಯುನ್ನತವಾದ ಶಬ್ಧ ಮಂಗಳವೆನ್ನುವ ಶಬ್ಧವೆಂದು, ಅದೇ ಮಂಗಳವೆನ್ನುವ ಮಾತನ್ನು ದೇವಾಲಯಗಳಲ್ಲಿ ಸಹ ದೇವರ ಆರಾಧನೆಯ ಕೊನೆಯಲ್ಲಿ ಹಾರತಿಯಲ್ಲಿ ಕೊನೆಯದಾಗಿ ಹೇಳುತ್ತಿರುತ್ತಾರೆಂದು ತಿಳಿಯದವರಿರುವುದರಿಂದ, ಮಂಗಳರು ಬ್ರಾಹ್ಮಣರಿಗಿಂತ ಎಲ್ಲಾ ವಿಧಗಳಲ್ಲಿ ಕೆಳಮಟ್ಟದಲ್ಲಿದ್ದಾರೆ. ಪೂರ್ವದಲ್ಲಿ ಗುಡಿಯಲ್ಲಿ ಪ್ರಾರಂಭವಾದ ತಲೆಬೋಳಿಸುವ ಕಾರ್ಯ ಈ ದಿನ ಹೊಟ್ಟೆಪಾಡಿಗಾಗಿ ಎನ್ನುವಂತೆ ಬಜಾರಿನಲ್ಲಿನ ಷಾಪುಗಳಿಗೆ ಬದಲಾಗಿದೆ. ಮುಖ್ಯವಾಗಿ ಹೇಳಿಕೊಳ್ಳುವಂತಹ ಸಂಗತಿ ಏನೆಂದರೆ! ಗೌರವ ಪ್ರದವಾದ ಮತ್ತು ಪವಿತ್ರವಾದ ಮಂಗಳವೆಂಬ ಪದವನ್ನು ಬಿಟ್ಟು, ಅಗೌರವವಾದ ಮತ್ತು ಅಪವಿತ್ರವಾದ **"ನಾಯಿ"** ಎನ್ನುವ ಹೆಸರನ್ನು ತಗಲಿಸಿಕೊಂಡು **'ನಾಯಿಬ್ರಾಹ್ಮಣ'** ಎಂದು ಹೆಸರು ಇಟ್ಟುಕೊಳ್ಳುವುದು ವಿಚಿತ್ರ ತಾನೆ! ಯಾವ ಷಾಪುಗಳಲ್ಲಿ ನೋಡಿದರೂ ನಾಯಿ ಬ್ರಾಹ್ಮಣ ಸಂಘ ಎಂದು ಬೋರ್ಡ್ ಇಟ್ಟುಕೊಳ್ಳುವುದು ಹಾಸ್ಯಾಸ್ಪದವಲ್ಲವೆ! ಓದು ಬಾರದ ಕೆಲವು ಜನರಿಗೆ ನಾಯಿ ಎಂದರೆ ಏನೆಂದು ಅರ್ಥ ತಿಳಿಯದೆ ಆ ಹೆಸರು ಇಟ್ಟುಕೊಂಡಿರಬಹುದು. ಆದರೆ ಓದಿಕೊಂಡವರು ಎಷ್ಟೋ ಜನ ಆ ಕುಲದಲ್ಲಿ ಇದ್ದು, ಇದು ನಮಗೆ ಒಳ್ಳೆಯ ಹೆಸರಾ ಕೆಟ್ಟಹೆಸರಾ ಎಂದು ಯೋಚಿಸದೆ ಹೋಗುವುದು ವಿಚಿತ್ರವಲ್ಲವೆ! ಅಂತಹ ಅರ್ಥದಿಂದ ನಮ್ಮದು ನಾಯಿ ಬ್ರಾಹ್ಮಣ ಸಂಘವೆಂದು ಬೋರ್ಡ್ ಇಟ್ಟುಕೊಳ್ಳುವುದು ಒಳ್ಳೆಯದಾ? ಈಗಲಾದರೂ ಕಣ್ತೆರೆದು ಸಮಾಜದಲ್ಲಿ ಅವಮಾನವನ್ನು ಉಂಟುಮಾಡುವ ಆ ಹೆಸರನ್ನು ಬಿಟ್ಟು ಪೂರ್ವದ

ಆಚರಣೆಯಿಂದ ಅರ್ಥದಿಂದಲೇ ಇದ್ದೂ, ಮೊದಲಿನ ರೀತಿಯಲ್ಲಿಯೇ ಮಂಗಳಪ್ರದವಾದ ಬ್ರಾಹ್ಮಣರಾಗಿ ತಮ್ಮಕೆಲಸ ಪವಿತ್ರವಾದುದೆಂದು, ನಮ್ಮ ಹೆಸರು ನಾಯಿಬ್ರಾಹ್ಮಣರು ಅಲ್ಲವೆಂದು ಸಮಾಜಕ್ಕೆ ಸಾರಬೇಕು. ಹಾಗೆ ಸಾರುವುದಕ್ಕೆ ಮೊದಲು ಜ್ಞಾನವನ್ನು ತಿಳಿದುಕೊಂಡು ಕುಲ ಆಚಾರವಾದ ನಾದವನ್ನು ಮೊಳಗಿಸುವುದಕ್ಕೂ, ತಲೆಬೋಳಿಸುವುದಕ್ಕು ದೈವಸಂಬಂಧ ಅರ್ಥವನ್ನು ಹೇಳಿ ನಿಜವಾದ ಮಂಗಳ ಪ್ರದಾತರಾಗಿ ಮಂಗಳರು ಇರಬೇಕೆಂದು ತಿಳಿಸುತ್ತಿದ್ದೇನೆ.

ಚರಿತ್ರೆಯಲ್ಲಿ ಮಧ್ಯದಲ್ಲಿ ಬಂದಿರುವ ಬ್ರಾಹ್ಮಣರು, ಚರಿತ್ರೆಯಲ್ಲಿ ಪೂರ್ವದಿಂದ ಇರುವ ಶುಭಕರರು ಎನ್ನುವ ಅರ್ಥದಿಂದಿರುವ ಮಂಗಳದ ವರನ್ನು, ಅಶುಭರಾಗಿ ಚಿತ್ರಿಸಿ, ಅವರ ಸ್ಥಾನವನ್ನು ಇವರು ಆಕ್ರಮಿಸಿ, ಕೊನೆಗೆ ಅವರನ್ನು ಬಜಾರು ಪಾಲು ಮಾಡಿದ್ದಾರೆ. ಮಂಗಳದವರು ಬ್ರಾಹ್ಮಣರಿರುವ ಕಡೆಯೆಲ್ಲಾ ಬಿಡದಂತಿದ್ದರೂ ಅವರನ್ನು ಕಡಿಮೆ ಕೆಲಸಗಳು ಮಾಡುವವರಾಗಿ ಚಿತ್ರಿಸಿದ್ದಾರೆ. ಮಂಗಳದವರಿಗೆ ಈ ದಿನ ತಮ್ಮ ಕುಲದ ಬಗ್ಗೆ ತಿಳಿಯದೇ ಈ ಮಧ್ಯೆ 1600 ವರ್ಷಗಳಿಂದ ಬಂದಿರುವ ಹೆಸರನ್ನು ನಾಯಿ ಬ್ರಾಹ್ಮಣ ಎಂದು ಹೇಳುತ್ತಾ ತಾವು ಮಂಗಳದವರೆಂದು, ನಮ್ಮಿಂದ ಶುಭಗಳು ಉಂಟಾಗುತ್ತವೆಂದು ಹೇಳಲಾರದೆ ಹೋಗುತ್ತಿದ್ದಾರೆ. ಕಾಲಕ್ರಮದಲ್ಲಿ ಅವರ ಚರಿತ್ರೆಯನ್ನು ಅವರು ಮರೆತು ಹೋಗಿದ್ದಾರೆ. ಹಾಗೆಯೇ ಬ್ರಾಹ್ಮಣರು ಸಹ ಅವರು ಪೂರ್ವದಲ್ಲಿ ಇತರ ಕುಲಗಳಿಂದ ಬಂದು ಬ್ರಾಹ್ಮಣರಾಗಿ ಉಳಿದುಹೋಗಿದ್ದೇವೆಂದು ಚರಿತ್ರೆಯನ್ನು ಮರೆತುಹೋಗಿದ್ದಾರೆ. ಈ ದಿನ ಅವರ ಚರಿತ್ರೆ ಅವರಿಗೆ ತಿಳಿಯದೆ ನಮ್ಮದು ಪ್ರತ್ಯೇಕವಾದ ಕುಲವೆಂದು, ನಾವು ಎಲ್ಲರಿಗಿಂತ ದೊಡ್ಡ ಕುಲದಲ್ಲಿ ಇದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ಕೆಲವು ಲಕ್ಷಗಳ ವರ್ಷಗಳ ಕೆಳಗೆ ಬ್ರಾಹ್ಮಣರು ಹೇಗೆ ಬಂದಿದ್ದಾರೋ, ಕೆಲವು ನೂರು ವರ್ಷಗಳ ಕೆಳಗೆ ನಾಯಿ ಬ್ರಾಹ್ಮಣರು ಹೇಗೆ ಬಂದಿದ್ದಾರೋ ನಾವು ಸ್ವಲ್ಪ ತಿಳಿದುಕೊಂಡಿದ್ದೇವೆ.

ಈ ದಿನ ಬ್ರಾಹ್ಮಣರು ಹಿಂದೂ ಸಮಾಜ ಒಟ್ಟಾರೆ ದೊಡ್ಡ ಕುಲವಾಗಿ ಚಲಾವಣೆ ಆಗುತ್ತಿದ್ದಾರೆ. ಮೊದಲು ದೇವಾಲಯಗಳಲ್ಲಿ ಪೂಜೆಗಳು ಮಾಡುವುದರಲ್ಲಿ ಹಕ್ಕುದಾರರಾಗಿ ಇರುವವರು ಕೊನೆಗೆ ಅವರ ವಿಧಾನ ಅವರಿಗೆ ತಿಳಿಯದೇ ಹೋಗಿದೆ. ಬ್ರಾಹ್ಮಣರಾಗಲಿ, ನಾಯಿ ಬ್ರಾಹ್ಮಣರಾಗಲಿ ಅವರ ಚರಿತ್ರೆಯನ್ನು ಅವರು ತಿಳಿಯುವುದಕ್ಕೆ ಸ್ವಲ್ಪವಾದರೂ ಸುಮುಖವಾಗಿಲ್ಲ. ಅವರ ಚಿಂತೆಯೆಲ್ಲ ಹೇಗೆ ಹಣ ಸಂಪಾದಿಸಿಕೊಳ್ಳಬೇಕೆನ್ನುವ ಆಲೋಚನೆಯಲ್ಲಿ ಬಿದ್ದುಹೋಗಿದ್ದಾರೆ. ಈದಿನ ನಾವು ಅವರ ಚರಿತ್ರೆಯನ್ನು ಬಿಚ್ಚಿ ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲದಂತೆ ಸತ್ಯವನ್ನು ಹೇಳುತ್ತಿರುವ ನಮ್ಮನ್ನು ಅಸೂಯೆಯಿಂದ ನೋಡುತ್ತಿದ್ದಾರೆ. ಅದರೂ ಬ್ರಾಹ್ಮಣರಲ್ಲಿ ಕೆಲವರು ಸಾತ್ತ್ವಿಕ ಭಾವವನ್ನು ಹೊಂದಿ ತಮ್ಮ ಚರಿತ್ರೆಯನ್ನು ಕೇಳುತ್ತಿದ್ದಾರೆ. ಚರಿತ್ರೆ ತಿಳಿದಿರುವುದಕ್ಕೆ ಸಂತೋಷಪಡುತ್ತಿದ್ದಾರೆ.

**ಪ್ರಶ್ನೆ :– ನೀವು ಹೇಳುವುದೆಲ್ಲ ಒಂದು ಕಡೆ ವಾಸ್ತವವೇ ಎನಿಸುತ್ತಿದೆ. ಚರಿತ್ರೆಯಲ್ಲಿ ನಡೆದ ಸಂಘಟನೆಗಳನ್ನು, ಬದಲಾವಣೆಗಳನ್ನು ಅನುಸರಿಸಿ ಎಲ್ಲಾ ಸತ್ಯವೇಯೆಂದು ಶೇ.99 ರಷ್ಟು ಅನಿಸಿದರೂ ಇನ್ನೂ ಶೇ. ಒಂದರಷ್ಟು ಸತ್ಯ ಅಲ್ಲವೇನೊ? ಎನಿಸುತ್ತಾ ಇದೆ. ಉಳಿದ ಕುಲಗಳಿಂದ ಬಂದು ಬ್ರಾಹ್ಮಣರು ಆಗಿರುವವರೇ ಮೊದಲ ಬ್ರಾಹ್ಮಣರು ಎಂದು ಹೇಳಿದ್ದಾರೆ. ಬ್ರಾಹ್ಮಣತ್ವ ವೃತ್ತಿಯೇ ಹೊರತು ಕುಲ ಅಲ್ಲವೆಂದು ಹೇಳಿದ್ದೀರ. ಆದರೂ ಇತರ ಕುಲದವರೇ ಬ್ರಾಹ್ಮಣರಾಗಿ ತಯಾರಾಗಿದ್ದಾರೆಂದು, ಬ್ರಹ್ಮ ವಿದ್ಯೆಯನ್ನು ಕಲಿತಿರುವುದರಿಂದ ಬ್ರಾಹ್ಮಣತ್ವ ಬಂದರೇ, ಅದನ್ನೇ ಕುಲವಾಗಿ ಹೇಳಿಕೊಂಡಿದ್ದಾರೆನ್ನುವ ವಿಷಯ ಹೆಚ್ಚಾಗಿ ಸತ್ಯವೇ ಇದ್ದರೂ, ಎಲ್ಲಿಯೋ ಶೇ. ಒಂದರಷ್ಟು ಸತ್ಯ ಅಲ್ಲವೇನೊ? ಎಂದು ಅನುಮಾನ ಬರುತ್ತಿದೆ. ನಮ್ಮ ಅನುಮಾನ ಹೋಗುವಂತೆ, ಪೂರ್ತಿ ಸತ್ಯ ಅರ್ಥವಾಗುವಂತೆ ಹೇಳಬೇಕೆಂದು ಕೋರುತ್ತಿದ್ದೇವೆ.**

**ಉತ್ತರ :–** ಹಾಗೆ ಅನುಮಾನ ಬರುವುದು ಸಹಜವೇ! ಆದರೇ ಅನುಮಾನ ಬಂದಷ್ಟು ಮಾತ್ರಕ್ಕೆ ಅದನ್ನು ಅಸತ್ಯವೆನ್ನುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ನಿಮಗೆ ಅರ್ಥವಾಗುವುದಕ್ಕೆ ಇನ್ನೂ ವಿವರವಾಗಿ ಹೇಳಬೇಕೆಂದುಕೊಂಡಿದ್ದೇವೆ. ಚೆನ್ನಾಗಿ

ಬುದ್ಧಿಯನ್ನು ಉಪಯೋಗಿಸಿ ಗ್ರಹಿಸಿರಿ. ಈ ವಿಷಯ ನಾನು ಹೇಳಿದಂತೆ ಮೇಲ್ನೋಟಕ್ಕೆ ನಿಮಗೆ ಕಾಣಿಸಿದರೂ ವಾಸ್ತವವಾಗಿ ಹೇಳುವವನು ನಾನು ಅಲ್ಲವೆಂದು ಮತ್ತೊಂದು ಸಲ ತಿಳಿಸುತ್ತಿದ್ದೇನೆ. ಮನುಷ್ಯನಲ್ಲಿ ಇದ್ದು ಮಾತನಾಡುವವನು, ಕೆಲಸಗಳು ಮಾಡುವವನು ದೇವರಾದ ಆತ್ಮವೇಯೆಂದು ಆ ವಿಷಯ ಯಾರಿಗೂ ತಿಳಿಯದೆ ನಾವೇ ಮಾತನಾಡುತ್ತಿದ್ದೇವೆಯೆಂದು, ನಾವೇ ಹೇಳುತ್ತಿದ್ದೇವೆಯೆಂದು ಅಂದುಕೊಳ್ಳುವುದು ನಡೆಯುತ್ತಿದೆ. ನನ್ನ ವಿಷಯ ನನಗೆ ತಿಳಿದಿದೆ. ನಾನು ಏನು ಮಾಡದವನು, ಏನು ಮಾತನಾಡದವನೆಂದು, ಆದರೂ ಎಲ್ಲರೂ ನಾನೇ ಮಾತನಾಡುತ್ತಿದ್ದೇನೆಂದು ಭ್ರಮಿಸುತ್ತಿದ್ದಾರೆ. ಸತ್ಯ ಆತ್ಮನಾದ ದೇವರಿಗೆ ತಿಳಿದಿದೆ ಆದ್ದರಿಂದ ಹೇಳುವುದೆಲ್ಲವೂ ಸತ್ಯವೇ ಇರುತ್ತದೆ. ಅಸತ್ಯ ಸ್ವಲ್ಪವೂ ಕೂಡಾ ಇರುವುದಿಲ್ಲ. ಈಗ ತಿಳಿಸುವುದೇನೆಂದರೆ! ನಿಮಗೆ ಬಂದ ಪ್ರಶ್ನೆ ಯಾರಿಗಾದರೂ ಬರಬಹುದು. ಆದ್ದರಿಂದ ಅದಕ್ಕೆ ಉತ್ತರವನ್ನು ತಿಳಿಯುವುದು ಎಷ್ಟೋ ಅಗತ್ಯ.

ಸೃಷ್ಠಿ ನಂತರ ಮಾನವ ಸಮಾಜ ಏರ್ಪಟ್ಟ ನಂತರ ವಾವಿ ವರಸೆಗಳಿಗಾಗಿ, ಮನುಷ್ಯರು ಪ್ರಾಣಿಗಳಂತೆ ಪ್ರವರ್ತಿಸದಂತಿರುವುದಕ್ಕೆ ಒಬ್ಬರಿಗೊಬ್ಬರು ಏನು ಆಗುತ್ತಾರೊ, ಏನೆಂದು ಕರೆಯಬೇಕೊ, ವಾವಿವರಸೆಗಳನ್ನು ನಿರ್ಣಯಿಸಿ ಅಮ್ಮ, ಅತ್ತೆ, ಅಜ್ಜಿ ಎನ್ನುವ ಮೂರು ವರಸೆಗಳನ್ನು ಮೊದಲು ಹೆಂಗಸರಲ್ಲಿ ನೇಮಿಸಿ ನಂತರ ಅವರ ಆಧಾರದಿಂದ ಉಳಿದ ವರಸೆಗಳೆಲ್ಲ ಏರ್ಪಡಿಸಿದ್ದಾರೆ. ಮೊದಲ ಅಕ್ಷರ ಒಂದೇ ಅಕ್ಷರ 'ಅ' ಇರುವಂತೆ ಇಟ್ಟು ಎರಡನೆ ಅಕ್ಷರವನ್ನು ಅದೇ ಅಕ್ಷರ ವತ್ತಿನಿಂದ ಇರುವಂತೆ ಮಾಡಿದ್ದಾರೆ. ಪ್ರಕೃತಿಯಿಂದಲೇ ಶರೀರ ಹುಟ್ಟುತ್ತಿದೆ ಆದ್ದರಿಂದ ಹೆಂಗಸರಿಂದಲೇ ಆ ಪದಗಳನ್ನು ನಿರ್ಣಯಿಸುವುದು ನಡೆದಿದೆ. ಪ್ರಕೃತಿಯಿಂದ ಮೂರು ಹೆಂಗಸರ ಮೊದಲ ಅಕ್ಷರಗಳನ್ನು ತೆಗೆದುಕೊಂಡು ನಂತರ ಮೂರು ವತ್ತುಗಳಿರುವ ಅಕ್ಷರಗಳನ್ನು ತೆಗೆದುಕೊಂಡಿದ್ದಾರೆ.

**ಅ – ಮ + ್ಮ = ಅಮ್ಮ – ಪ್ರಕೃತಿ**

**ಅ – ತೆ + ್ತ = ಅತ್ತೆ – ಪ್ರಕೃತಿ**

**ಅ – ಜಿ + ್ಜ = ಅಜ್ಜಿ – ಪ್ರಕೃತಿ**

ನಂತರ ಗಂಡಸರಲ್ಲಿ ಮೂರು ಮುಖ್ಯವಾದ ವರಸೆಗಳ ಪದಗಳನ್ನು ತೆಗೆದುಕೊಂಡು ಒಬ್ಬರಿಗೊಬ್ಬರ ಬಾಂಧವ್ಯವನ್ನು ಏರ್ಪಡಿಸಿದ್ದಾರೆ. ಮೂರು ಬಾಂಧವ್ಯಗಳ ಪದಗಳು ಪುರುಷ ಸಂಬಂಧವಾದವು. ಅವು ಈ ವಿಧವಾಗಿ ಇವೆ. ನಾನಾ(ಅಪ್ಪ), ಮಾಮಾ, ತಾತಾ.

**ನಾ – ನ + ಾ = ನಾನಾ – (ಅಪ್ಪ) ಪುರುಷ**

**ಮಾ – ಮ + ಾ = ಮಾಮಾ – ಪುರುಷ**

**ತಾ – ತ + ಾ = ತಾತಾ – ಪುರುಷ**

ಈ ವಿಧವಾಗಿ ಆರು ವರಸೆಗಳು ಮಾಡಿ ಅವರಿಗೆ ಉಳಿದ ಆರು ವರಸೆಗಳನ್ನು ಮಾಡಿದ್ದಾರೆ ನಂತರ ಪುಟದಲ್ಲಿ ನೋಡಿರಿ.

**ಅಮ್ಮ – ಮಗಳು = ನಾನಾ (ಅಪ್ಪ) – ಮಗ (ಪ್ರಕೃತಿ ಪುರುಷನು)**

**ಅತ್ತೆ – ಸೊಸೆ = ಮಾಮಾ – ಅಳಿಯ (ಪ್ರಕೃತಿ ಪುರುಷನು)**

**ಅಜ್ಜಿ – ಮೊಮ್ಮಗಳು = ತಾತಾ – ಮೊಮ್ಮಗ (ಪ್ರಕೃತಿ ಪುರುಷನು)**

ಈ ವಿಧವಾಗಿ ಹನ್ನೆರಡು ವರಸೆಗಳು ಕಲ್ಪಿಸಿ ಇವರೊಂದಿಗೆ ಅವರು ವಿವಾಹ ಮಾಡಿಕೊಳ್ಳಬಹುದು ಎನ್ನುವುದಕ್ಕೆ ಮನುಷ್ಯರನ್ನು ಎರಡು ವರ್ಗಗಳ ಮನೆ ಹೆಸರುಗಳಿಂದ ಎರಡಾಗಿ ವಿಭಜಿಸಿ ಒಬ್ಬರಿಗೊಬ್ಬರು ವಿವಾಹಗಳು ಮಾಡಿಕೊಳ್ಳುವುದಕ್ಕೆ ಏರ್ಪಾಟು ಮಾಡಿದ್ದಾರೆ. ಆ ನಿಟ್ಟಿನಲ್ಲಿ ಕೆಲವು ಕುಲಗಳಿಗೆ

ಕೆಲವು ಮನೆ ಹೆಸರುಗಳು ನಿಗದಿಸಿ ಅವರಲ್ಲಿ ಎರಡು ವರಸೆಗಳು ಮಾಡಿ ಒಬ್ಬರಿಗೊಬ್ಬರು ಮದುವೆಗಳು ಮಾಡಿಕೊಳ್ಳುವಂತೆ ಮಾಡಿದ್ದಾರೆ. ಮನೆ ಹೆಸರುಗಳು ಅವುಗಳಿಗೆ ಅನುಬಂಧವಾಗಿ, ಮನೆ ಹೆಸರುಗಳು ಮರೆತು ಹೋಗದಂತೆ ಗೋತ್ರಗಳನ್ನು ಏರ್ಪಾಟು ಮಾಡಿದ್ದಾರೆ. ಇಂತಹ ಕುಲ, ಇಂತಹ ಗೋತ್ರ, ಇಂತಹ ಮನೆ ಹೆಸರು ಎಂದು ಅಡ್ರಸ್‌ನಂತೆ ಇರುತ್ತಿದ್ದವು. ಎರಡು ಮೂರು ಕುಲಗಳಿಗೆ ಒಂದು ಮನೆ ಹೆಸರನ್ನು, ಇನ್ನೂ ಹೆಚ್ಚಿನ ಕುಲದವರಿಗೆ ಗೋತ್ರದ ಹೆಸರನ್ನು ಗುರುತಿಸಿ ಅವರ ಪೂರ್ತಿ ಅಡ್ರಸ್ ಎನ್ನುವಂತೆ ಮಾಡಿಟ್ಟಿದ್ದಾರೆ.

ಗತದಲ್ಲಿ ಪೂರ್ವದಲ್ಲಿಯೇ ಕೆಲವು ಕುಲದವರು ಬಂದು ಬ್ರಾಹ್ಮಣರಾಗಿ ಬದಲಾಗಿರುವುದರಿಂದ ಇದು ಅವರ ಪೂರ್ವದ ಅಡ್ರಸ್ (ವಿಳಾಸ) ಎನ್ನುವಂತೆ ಬ್ರಾಹ್ಮಣರ ಮನೆ ಹೆಸರುಗಳು ಸ್ವಲ್ಪ ದಾರಿ ತೋರಿಸುತ್ತಿವೆ. ಬೋಯ (ವಾಲ್ಮೀಕಿ) ಕುಲದವನು ಪೂರ್ವದಲ್ಲಿ ಬ್ರಹ್ಮವಿದ್ಯೆಯನ್ನು ಕಲಿತು ಬ್ರಾಹ್ಮಣನಾಗಿ ಬದಲಾಗಿದ್ದಾನೆ ಎನ್ನುವುದಕ್ಕೆ ಸಾಕ್ಷ್ಯವಾಗಿ ಆತನು ಈ ದಿನ ಬ್ರಾಹ್ಮಣನಾಗಿದ್ದರೂ ಆ ದಿನ ಬೋಯಕುಲದಲ್ಲಿ ಇರುವ ಮನೆ ಹೆಸರೇ ಈ ದಿನ ಕೂಡಾ ಇದೆ. "ನೆಟ್ಟಿ ಕಂಟಿ" ಎನ್ನುವ ಮನೆ ಹೆಸರಿರುವ ಒಬ್ಬ ಬೋಯನು ಬ್ರಾಹ್ಮಣನಾಗಿ ಬದಲಾಗಿ ಬ್ರಾಹ್ಮಣನಾಗಿ ನಿಂತುಹೋಗಿದ್ದಾನೆಂದುಕೊಳ್ಳಿ. ಅದು ಸತ್ಯ ಎಂದು ತಿಳಿಯುವುದಕ್ಕೆ ಆತನ ಮನೆ ಹೆಸರು ಉಳಿದ ಬೋಯರಲ್ಲಿಯೂ ಕೂಡಾ ಇರುವುದರಿಂದ ಆತನು ಪೂರ್ವದಲ್ಲಿ ಇಂತಹ ಕುಲದಿಂದ ಇಂತಹ ಮನೆ ಹೆಸರಿನಿಂದ ಬಂದಿದ್ದಾನೆಂದು ತಿಳಿಯುತ್ತಿದೆ. ಆಗ ಆತನ ಪೂರ್ವದ ಕುಲ ಬೋಯಕುಲ ಎನ್ನುವುದು ಸತ್ಯವಾಗುತ್ತಿದೆ.

ಉದಾಹರಣೆಗೆ 'ತಾಂಬೂಲ' ಎನ್ನುವ ಮನೆಹೆಸರು ಒಂದು ಹರಿಜನರ ಮನೆ ಹೆಸರಾಗಿ ಇದೆಯೆಂದುಕೊಳ್ಳಿ. ಅದೇ 'ತಾಂಬೂಲ' ಎನ್ನುವ ಮನೆ ಹೆಸರು ಬ್ರಾಹ್ಮಣರಲ್ಲಿ ಇದೆಯೆಂದುಕೊಳ್ಳಿ. ಆಗ ಪೂರ್ವದಲ್ಲಿ ಒಬ್ಬ ಹರಿಜನನು ಬ್ರಹ್ಮವಿದ್ಯೆಯನ್ನು ಕಲಿತಿರುವುದರಿಂದ ಬ್ರಾಹ್ಮಣನಾಗಿ ಲೆಕ್ಕಿಸಲ್ಪಟ್ಟಿದ್ದಾನೆ. ನಂತರ

ಆತನು ಬ್ರಾಹ್ಮಣನಾಗಿ ನಿಂತುಹೋಗುವುದರಿಂದ ಆತನ ಮನೆಹೆಸರು ಈ ದಿನ ಬ್ರಾಹ್ಮಣ ಕುಲದಲ್ಲಿ ಕೂಡಾ ಇದೆಯೆಂದು ಹೇಳಬಹುದು. ಈ ವಿಧವಾಗಿ ಪೂರ್ವದಲ್ಲಿ ಮನೆಹೆಸರುಗಳು ಎಲ್ಲಿಯಾದರೂ ಯಾವ ಬ್ರಾಹ್ಮಣನ ಮನೆಹೆಸರಾಗಿದ್ದರೂ ಇದು ಮಧ್ಯ ಬಂದಿರುವ ಕುಲವಾಗಿರುವುದರಿಂದ ಆತನ ಪೂರ್ವಕುಲ ಇಂತಹದ್ದೆಂದು ಹೇಳಬಹುದು. ಹಾಗೆ ಎಷ್ಟೋ ಜನ ಇತರೆ ಕುಲಗಳಿಂದ ಬಂದು ಬ್ರಾಹ್ಮಣರಾಗಿ ತಯಾರಾಗಿ ಬ್ರಾಹ್ಮಣರಾಗಿ ನಿಂತುಹೋಗಿ ದ್ದಾರೆನ್ನುವ ಸತ್ಯ ಅವರ ಮನೆ ಹೆಸರುಗಳ ಆಧಾರದಿಂದ ಸ್ವಲ್ಪಮಟ್ಟಿಗೆ ಗುರುತಿಸಬಹುದು. ಸತ್ಯ ತಿಳಿಯುವುದಕ್ಕಾಗಿ ಈ ವಿಧವಾಗಿ ಹೇಳುತ್ತಿದ್ದೇವೆ ಹೊರತು ಬ್ರಾಹ್ಮಣರನ್ನಾಗಲಿ, ಇತರೆ ಕುಲಗಳನ್ನಾಗಲಿ ಹೇಳನೆ ಮಾಡುವುದಕ್ಕೆ ಹೇಳಲಿಲ್ಲವೆಂದು ತಿಳಿಯಬೇಕು. ಇದು ಸತ್ಯಾನ್ವೇಷಣೆ ಹೊರತು ಇತರೆ ಭಾವವೇನು ಇಲ್ಲವೆಂದು ತಿಳಿಯಬೇಕು.

ಪೂರ್ವದಲ್ಲಿ ನಡೆದು ಹೋಗಿರುವುದು ನಡೆದುಹೋಗಿದೆ. ಈಗ ನಡೆಯಬೇಕಾಗಿರುವುದನ್ನು, ನಡೆಯುತ್ತಿರುವುದನ್ನು ನೋಡಿಕೊಳ್ಳಬೇಕಾದ ಅಗತ್ಯವಿದೆ. ಈ ದಿನ ನಾವು ತಿಳಿದುಕೊಳ್ಳಬೇಕಾದ ಕೋನದಲ್ಲಿ ನೋಡಿದರೆ ಈ ದಿನವಾಗಲಿ ಪೂರ್ವದಲ್ಲಾಗಲಿ ಹಿಂದೂ ಸಮಾಜಕ್ಕೆ ಬ್ರಹ್ಮವಿದ್ಯೆ ದೀಪ ವಿದ್ದಂತೆ. ಏಕೆಂದರೇ! ಈ ದಿನ ಹಿಂದೂ ಸಮಾಜ ಎಂದು ಕರೆಯಲ್ಪಡುವುದು ಪೂರ್ವದಲ್ಲಿ ಇಂದೂ ಸಮಾಜ ಎನ್ನುವ ಹೆಸರಿನಿಂದ ಇತ್ತು. ಈ ಮಧ್ಯದಲ್ಲಿ ನೂರರಿಂದ ನೂರೈವತ್ತು (100–150) ವರ್ಷಗಳೊಳಗೆ **ಇಂದೂ** ಎನ್ನುವ ಪದ **ಹಿಂದೂ** ಎನ್ನುವ ಪದವಾಗಿ ಮಾರ್ಪಟ್ಟಿದೆ. ಹೇಗೆ ಪೂರ್ವದಿಂದ ಬ್ರಾಹ್ಮಣಕುಲ ತಯಾರಾಗಿದೆಯೋ ತಿಳಿಯದ ನಾವು ನೂರು ವರ್ಷಗಳ ಕೆಳಗಿನಿಂದ ಇಂದೂ ಹಿಂದೂವಾಗಿ ಬದಲಾಗಿ ಹೋಗಿದೆಯೆನ್ನುವ ವಿಷಯ ತಿಳಿಯಲಾರದೆ ನಮ್ಮದು ಹಿಂದೂಮತವೇಯೆಂದು ಹೇಳಿಕೊಳ್ಳುತ್ತಿದ್ದೇವೆ. ಚರಿತ್ರೆ ತಿಳಿದ ನಾವು ನಮ್ಮದು ಹಿಂದೂ ಪದ ಅಲ್ಲ ಇಂದೂ ಎನ್ನುವ ಪದ ಎಂದು ಹೇಳಿದರೇ ನಾವು ಪರಮತವನ್ನು ಬೋಧಿಸುತ್ತಿದ್ದೇವೆಂದು ನಮ್ಮನ್ನು ಪ್ರಚಾರ

ಮಾಡಿದ ಹಿಂದೂಗಳು ಇದ್ದಾರೆ. ಮತ ಭಕ್ತಿಯನ್ನು ಬೆಳೆಸಿಕೊಂಡು ಪೂರ್ತಿ ಕುರುಡರಂತೆ ತಯಾರಾಗಿ ಪೂರ್ವದಲ್ಲಿ ನಮ್ಮ ಇರುವಿಕೆ ಏನು? ನಮ್ಮ ಮತದ ಹೆಸರು ಏನು? ಎಂದು ತಿಳಿಯದೆ ಜ್ಞಾನಿಗಳು ಎನ್ನುವ ಅರ್ಥವಿರುವ ಇಂದೂ ಪದವನ್ನು ಬಿಟ್ಟು ಅರ್ಥವಿಲ್ಲದ ಹಿಂದೂ ಪದವನ್ನು ಇಟ್ಟುಕೊಂಡಿದ್ದಾರೆ. ನಾವು ಹೇಳಿರುವುದು ನಿಜವೆನ್ನುವುದಕ್ಕೆ ನಂತರ ಪುಟದಲ್ಲಿ ಒಂದು ನ್ಯೂಸ್‌ಪೇಪರ್‌ನಲ್ಲಿ ಬಂದಿರುವ ಸಮಾಚಾರವನ್ನು ನೋಡಿರಿ.

ನ್ಯೂಸ್‌ಪೇಪರ್ ವಾರ್ತೆಗಳಿಂದಾದರೂ ಕಣ್ತೆರೆದು ನಾವು ಹಿಂದೂಗಳ ಪದದಿಂದ ಕರೆಯಲ್ಪಡಬಾರದು, ಇಂದೂ ಪದದಿಂದ ಕರೆಯಲ್ಪಡಬೇಕೆಂದು ತಿಳಿದುಕೊಳ್ಳುತ್ತಾರೆಂದು ಅಂದುಕೊಳ್ಳುತ್ತಿದ್ದೇವೆ. ಹಿಂದೂ ಸಮಾಜ ದೈವಜ್ಞಾನದ ಮೇಲೆ ಆಧಾರಪಟ್ಟಿದೆ. ಈ ದಿನ ಉಳಿದ ಮತಗಳು ಕೂಡಾ ಅವರು ದೈವಜ್ಞಾನವನ್ನು, ಅವರ ದೈವಗ್ರಂಥಗಳನ್ನು ಆಧಾರ ಮಾಡಿಕೊಂಡು ಅವರಿಗೆ ತಿಳಿದ ಜ್ಞಾನ ಅವರು ಹೇಳಿಕೊಳ್ಳುತ್ತಾ ಅವರ ಮತಗಳನ್ನು ಮುಂದಕ್ಕೆ ತೆಗೆದುಕೊಂಡು ಹೋಗುತ್ತಿದ್ದಾರೆ. ಹಾಗೆ ಹಿಂದೂಗಳು ಕೂಡಾ ದೈವಜ್ಞಾನ ಆಧಾರವಾಗಿ ಮುಂದಕ್ಕೆ ಹೋಗಬೇಕಾಗಿದೆ. ಆದರೇ ಬ್ರಹ್ಮವಿದ್ಯೆ ಎನ್ನುವುದು ಸ್ವಲ್ಪವಾದರೂ ತಿಳಿಯದ ಬ್ರಾಹ್ಮಣರು ಹಿಂದೂಮತದಲ್ಲಿ ಇರುವುದರಿಂದ, ಹಿಂದೂಗಳಿಗೆ ದಾರಿತೋರಿಸುವವರು ಯಾರೂ ಇಲ್ಲದಿರುವುದರಿಂದ, ಹಿಂದೂಗಳಿಗೆ ಹಿಂದೂಗಳ ಜ್ಞಾನ ಯಾವುದೊ ತಿಳಿಯದಿರುವುದರಿಂದ ಜ್ಞಾನದಿಂದ ಮುಂದಕ್ಕೆ ಹೋಗುವ ಹಿಂದೂಮತ ಮುಂದಕ್ಕೆ ಹೋಗಲಾರದೆ ಕುಂಟುಬಿದ್ದು ಹೋಗಿದೆ. ಜ್ಞಾನ ದೀಪ ತಮ್ಮ ಮತದಲ್ಲಿ ಕಾಣಿಸದೆ ಹೋದಲ್ಲಿ ಎಲ್ಲಿ ಜ್ಞಾನ ಬೆಳದಿಂಗಳು ಕಾಣಿಸಿದರೆ ಅಲ್ಲಿಗೆ ಹಿಂದೂಗಳು ಹೋಗಿ ಆ ಮತಗಳಲ್ಲಿ ಸೇರಿಹೋಗುತ್ತಿದ್ದಾರೆ.

ತ್ರೇತಾಯುಗದಲ್ಲಿ, ದ್ವಾಪರಯುಗದಲ್ಲಿ ರಾಜರ ಬಳಿ, ಚಕ್ರವರ್ತಿಗಳ ಬಳಿ ಸೇರಿ ಅವರ ಆಸ್ಥಾನ ಪಂಡಿತರಾಗಿಯೋ ಅಥವಾ ಅವರ ಆಸ್ಥಾನ ಗುರುಗಳಾಗಿಯೋ ಬ್ರಾಹ್ಮಣರು ಚಕ್ರ ತಿರುಗಿಸುತ್ತಿದ್ದರು. ರಾಜರ ಪರಿಚಯ

Sakshi News pepar, 12-10-2015

# ‘ಹಿಂದೂ ಪದಕ್ಕೆ ನಿರ್ವಚನ ತಿಳಿದಿಲ್ಲ’

ಇಂಡೋರ್ : ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿದೆ. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿದೆ. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಪ್ರಮುಖರ ಲೇಖ

Sakshi News pepar, 21-01-2014



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಅಂದಿನ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನೆಗೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೆ ಹಿಂದೂ ದೇಶವಾಗಿದೆ.

ರಾಮಾಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತ ಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎನ್ನುವ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಾಗೆ ಬರೆದ ಲೇಖನದಿಂದ

ಇರುವುದರಿಂದ ಅವರಿಗೆ ದೈವಜ್ಞಾನವನ್ನು ಬೋಧಿಸುತ್ತಾ ರಾಜರನ್ನು ಸಹಿತವು ಸಕ್ರಮವಾಗಿ ನಡೆದುಕೊಳ್ಳುವಂತೆ ಮಾಡುತ್ತಿದ್ದರು. ತ್ರೇತಾಯುಗದಲ್ಲಿ ರಾಜರು ಬ್ರಾಹ್ಮಣರಿಂದ ಬ್ರಹ್ಮವಿದ್ಯೆಯನ್ನು ತಿಳಿದು, ಅವರ ಜೀವನವನ್ನು ಸಾಫಲ್ಯ ಮಾಡಿಕೊಳ್ಳುವುದಲ್ಲದೆ ಪ್ರಜೆಗಳಿಗೆ ಸಕ್ರಮವಾದ ಪಾಲನೆ ನೀಡುತ್ತಿದ್ದರು. ಮನುಷ್ಯರಲ್ಲಿ ಹೆಚ್ಚಾಗಿ ಪಾಪ ಭಾವನೆ ಇಲ್ಲದಿರುವುದರಿಂದ, ಬಾಧೆಗಳು ಅನುಭವಿಸುವವರು ಕಡಿಮೆ ಇರುತ್ತಿದ್ದರು. ತಿಂಗಳಿಗೆ ಮೂರು ಮಳೆಗಳು ಸುರಿದು, ಬೆಳೆಗಳು ಸಸ್ಯಶ್ಯಾಮಲವಾಗಿ ಬೆಳೆಯುತ್ತಿದ್ದವು. ಎಲ್ಲಿ ನೋಡಿದರೂ ವರ್ಷವೆಲ್ಲಾ ನದಿಗಳು, ಹಳ್ಳಗಳು ಚಿಕ್ಕದಾಗಿ ಹರಿಯುತ್ತಿದ್ದವು. ನೀರಿನ ಕೊರತೆ ಎಲ್ಲಿಯೂ ಇರಲಿಲ್ಲ. ಪ್ರಕೃತಿ ವೈಪರೀತ್ಯಗಳು ಇಂದಿಗಿಂತ ಅಂದು ಕಡಿಮೆ ಇದ್ದವು. ಪಾಲನೆಯಲ್ಲಿ ದೊಡ್ಡವನಾದ ರಾಜನಾಗಲಿ, ರಾಜನ ಕೆಳಗಿರುವ ಪಾಲನೆಯಲ್ಲಿ ಚಿಕ್ಕ ಉದ್ಯೋಗಿಯಾದರೂ ದೈವಜ್ಞಾನವನ್ನು ತಿಳಿಯುತ್ತಿದ್ದರು. ಆಗ ಎಷ್ಟೋಜನ ಬ್ರಾಹ್ಮಣರೇ ಗುರುಗಳಾಗಿದ್ದು ಪ್ರಜೆಗಳಿಗೆ ಜ್ಞಾನವನ್ನು ಬೋಧಿಸುತ್ತಿದ್ದರು. ಅವರು ಬೋಧನೆ ಹೇಳಿ ಸುಖವಾಗಿ ಬದುಕುತ್ತಿದ್ದರು. ಆ ಕಾಲದಲ್ಲಿ ಬ್ರಾಹ್ಮಣರನ್ನು ಪ್ರತಿಯೊಂದು ಕುಲದವರು ಗೌರವವಾಗಿ ನೋಡುತ್ತಾ ನಮಸ್ಕರಿಸುತ್ತಿದ್ದರು. ಬ್ರಾಹ್ಮಣರು ಎಂದರೇ 'ಕಾಣಿಸುವ ದೇವತೆಗಳು' ಎನ್ನುವ ಸ್ಥಾಯಿಯಲ್ಲಿ ಅವರಿಗೆ ಗೌರವ ಇರುತ್ತಿತ್ತು. ಇದಕ್ಕೆಲ್ಲ ಕಾರಣ ಅವರಿಗೆ ಬ್ರಹ್ಮಜ್ಞಾನ ತಿಳಿದಿರುವುದೇ. ಬ್ರಾಹ್ಮಣರು ತಮ್ಮ ಮಕ್ಕಳಿಗೆ ಚಿಕ್ಕಂದಿನಿಂದಲೇ ಜ್ಞಾನ ಕಲಿಸುತ್ತಿದ್ದರು.

ಈ ವಿಧವಾಗಿ ತ್ರೇತಾಯುಗವೆಲ್ಲವೂ ಕಳೆದುಹೋಗಿ, ದ್ವಾಪರ ಯುಗದಲ್ಲಿ ಬ್ರಾಹ್ಮಣರು ಬ್ರಹ್ಮವಿದ್ಯೆ ಮೇಲೆ ದೃಷ್ಠಿ ನಿಲ್ಲಿಸದೆ, ಹೆಚ್ಚಾಗಿ ಪ್ರಪಂಚ ವಿಷಯಗಳ ಮೇಲೆ ದೃಷ್ಠಿ ಹಾಯಿಸುತ್ತಿದ್ದರು. ಆದ್ದರಿಂದ ಅಲ್ಲಲ್ಲಿ ಒಬ್ಬೊಬ್ಬರಾಗಿ ಅಜ್ಞಾನದಕಡೆ ಪಯನಿಸತೊಡಗಿದರು. ರಾಜರ ಹತ್ತಿರವಿದ್ದು ರಾಜ್ಯವೊಂದರ ಒಳಿತನ್ನು ಕೋರುವ ಬ್ರಾಹ್ಮಣರು, ರಾಜರಿಗೆ ಒಳ್ಳೆಯ ಸಲಹೆಗಳನ್ನು ಕೊಟ್ಟು ರಾಜ್ಯದಲ್ಲಿ ಯಾವ ಅನಿಷ್ಟಗಳು ನಡೆಯದಂತೆ ಜವಾಬ್ಧಾರಿಯಿಂದ ನೋಡಿಕೊಳ್ಳುವ ಬ್ರಾಹ್ಮಣರು,

ಸ್ವಲ್ಪ ಸ್ವಲ್ಪವಾಗಿ ಜ್ಞಾನದ ಮೇಲೆ ಶ್ರದ್ಧೆ ತಗ್ಗಿಸಿಕೊಳ್ಳುತ್ತಾ ಅಜ್ಞಾನದ ಕಡೆ ದೃಷ್ಟಿ ತೋರಿಸುತ್ತಿದ್ದರು. ಹಾಗೆ ಅವರು ಬದಲಾಗುವುದಕ್ಕೆ ಸ್ವಲ್ಪ ಕಾರಣವಿದೆ. ಪ್ರಭುಗಳಿಗೆ (ರಾಜರಿಗೆ) ಹತ್ತಿರವಾಗಿದ್ದು ರಾಜ ಕೊಡುವ ಕಾಣಿಕೆಗಳಿಂದ ಜೀವಿಸುವ ಬ್ರಾಹ್ಮಣರು ಸ್ವಲ್ಪ ಪ್ರಜೆಗಳಿಗು ಕೂಡಾ ಹತ್ತಿರವಾಗಿದ್ದು ಪ್ರಜೆಗಳಿಂದ ಕೂಡಾ ಲಾಭವನ್ನು ಹೊಂದಬೇಕೆಂಬ ಆಸೆಯನ್ನು ಬೆಳೆಸಿಕೊಂಡಿದ್ದಾರೆ. ಅದರಿಂದ ಬ್ರಹ್ಮವಿದ್ಯೆ ಮೇಲೆ ಶ್ರದ್ಧೆ ಕಡಿಮೆಯಾಗಿದೆ. ಬ್ರಹ್ಮಜ್ಞಾನದ ಮೇಲೆ ಪ್ರಜೆಗಳಿಗೆ ಶ್ರದ್ಧೆ ಇಲ್ಲ. ಆದ್ದರಿಂದ ಅದನ್ನು ಪ್ರಜೆಗಳು ಕೇಳುವುದಿಲ್ಲವೆಂದು ಭಾವಿಸಿದ ಬ್ರಾಹ್ಮಣರು ಪ್ರಜೆಗಳಿಗೆ ಜ್ಞಾನ ಹೇಳುವುದು ಕಡಿಮೆಮಾಡಿದ್ದಾರೆ. ಅಂದಿನ ಪ್ರಜೆಗಳಿಗೆ ಶೇ.ಅರವತ್ತ (60) ರಷ್ಟು ಜ್ಞಾನದ ಮೇಲೆ ಶ್ರದ್ಧೆ ಇಲ್ಲದವರಿರುವಾಗ, ಶೇ. ನಲವತ್ತ (40) ರಷ್ಟು ಶ್ರದ್ಧೆ ಇರುವವರು ಇರುತ್ತಿದ್ದರು. ಶೇ. 60 ರಷ್ಟು ಜನರನ್ನು ಬಿಟ್ಟು ಶೇ.40 ರಷ್ಟು ಜನರಿಗೆ ಜ್ಞಾನ ಹೇಳಬೇಕಾದ ಜವಾಬ್ದಾರಿ ಗುರುಗಳಾಗಿರುವ ಬ್ರಾಹ್ಮಣರಿಗೆ ಇದೆ. ಅವರಿಗೆ ಹೇಳುವುದಲ್ಲದೇ ಉಳಿದ ಶ್ರದ್ಧೆಯಿಲ್ಲದ ಶೇ.60 ರಷ್ಟು ಜನರಿಗು ಕೂಡಾ ಜ್ಞಾನದ ಮೇಲೆ ಶ್ರದ್ಧೆ ಉಂಟುಮಾಡುವ ಜವಾಬ್ದಾರಿ ಬ್ರಾಹ್ಮಣರಿಗೆ ಇದೆ. ಆದರೇ ಅವರು ಹಾಗೆ ಮಾಡಲಿಲ್ಲ.

ಜ್ಞಾನದ ಸ್ಥಾನದಲ್ಲಿ ಜ್ಯೋತಿಷ್ಯವನ್ನು ಸೇರಿಸಿ ಪ್ರತಿ ಕೆಲಸಕ್ಕು ಮುಹೂರ್ತವನ್ನು ಹೇಳಿ ಪ್ರಜೆಗಳಿಗೆ ಒಳ್ಳೆಯದು ಮಾಡುವವರಂತೆ ಕಾಣಿಸಿ, ಮುಹೂರ್ತಕ್ಕಾಗಿ ತಮ್ಮ ಹತ್ತಿರಕ್ಕೆ ಬಂದಿರುವ ಪ್ರತಿಯೊಬ್ಬರು ಅಷ್ಟೋ ಇಷ್ಟೋ ಧನವೊ, ಧಾನ್ಯವೊ ಕೊಡುವಂತೆ ಮಾಡಿಕೊಂಡಿದ್ದಾರೆ. ಹಾಗೆ ಪ್ರತಿ ಚಿಕ್ಕ ಕೆಲಸಕ್ಕು ಮುಹೂರ್ತವೆಂದೋ, ಜಾತಕವೆಂದೊ, ಜ್ಯೋತಿಷ್ಯವೆಂದೊ, ಒಳ್ಳೆಯ ದಿನಗಳೆಂದೋ ಯಾವುದೋ ಒಂದು ಕೆಲಸಕ್ಕೆ ಬ್ರಾಹ್ಮಣರ ಹತ್ತಿರಕ್ಕೆ ಹೋಗಬೇಕಾಗಿ ಬರುತ್ತಿತ್ತು. ಹೋದವರು ಸುಮ್ಮನೆ ಹೋದರೆ ಅವರು ಮಾತನಾಡುವುದಿಲ್ಲವೆಂದು, ತಮ್ಮೊಂದಿಗೆ ಮಾತನಾಡುವುದಿಲ್ಲವೆಂದು, ಬ್ರಾಹ್ಮಣರನ್ನು ತಮ್ಮವರನ್ನಾಗಿ ಮಾಡಿಕೊಂಡು ಅವರು ಕೇಳಿರುವುದು

ಹೇಳುವುದಕ್ಕೆ ಪ್ರಜೆಗಳು ಪೋಟಿಬಿದ್ದು ಹಣ ಕೊಡುತ್ತಿದ್ದರು. ಈ ವಿಧಾನವನ್ನು ಹೆಚ್ಚಿನ ಜನ ಬ್ರಾಹ್ಮಣರು ಮುಂದುವರೆಸಿದರು. ಅಷ್ಟೇ ಅಲ್ಲದೆ ಅಲ್ಲಿಯವರೆಗು ರಾಜರಿಗೇ ಪರಿಮಿತಿಯಾದ ಯಜ್ಞ ಯಾಗಾದಿಗಳನ್ನು ಪ್ರಜೆಗಳಿಂದಲೂ ಕೂಡಾ ಮಾಡಿಸುವುದಕ್ಕೆ ಶುರು ಮಾಡಿದ್ದಾರೆ. ಅದರಿಂದ ಧನ ಕೈಗೂಡುತ್ತದೆನ್ನುವ ಆಸೆಯಿಂದ ಆ ವಿಧವಾಗಿ ಮಾಡುತ್ತಾ, ಧನವನ್ನು ಸಮುಪಾರ್ಜನೆ ಮಾಡುತ್ತಾ ಪ್ರಜೆಗಳಲ್ಲಿ ಅತ್ಯಂತ ಧನಿಕರಾಗಿ ಬ್ರಾಹ್ಮಣರೇ ಇದ್ದರು. ಈ ವಿಧವಾಗಿ ದ್ವಾಪರಯುಗದ ಕೊನೆಯವರೆಗು ಬದಲಾಗುತ್ತಾ ಬಂದ ಬ್ರಾಹ್ಮಣರು ಕೊನೆಗೆ ಜ್ಞಾನ ತಿಳಿದವರು ಅಪರೂಪವಾಗಿ ಕಾಣಿಸಿದಾಗ, ಬ್ರಹ್ಮ ಜ್ಞಾನ ಇಲ್ಲದವರು, ಪಂಚಾಂಗವನ್ನು ಹೇಳುವವರು, ಯಜ್ಞ ಯಾಗಾದಿಗಳನ್ನು ಮಾಡಿಸುವವರು ಎಲ್ಲಿ ನೋಡಿದರೂ ಕಾಣಿಸುತ್ತಿದ್ದರು. ಈ ವಿಧವಾಗಿ ಬ್ರಾಹ್ಮಣ ಸಮಾಜ ಬದಲಾಗುತ್ತಾ ಬಂದು, ಕಲಿಯುಗ ಪ್ರಾರಂಭಕ್ಕೆಲ್ಲಾ ಶೇ.ಇಪ್ಪತ್ತ (20) ರಷ್ಟು ಬ್ರಹ್ಮಜ್ಞಾನಿಗಳಿರುವಾಗ ಶೇ.ಎಂಬತ್ತ (80) ರಷ್ಟು ಜ್ಞಾನ ಇಲ್ಲದವರು ಇದ್ದರು.

ಕಲಿಯುಗ ಪ್ರಾರಂಭದಲ್ಲಿ ನಾಲ್ಕು ಅಧರ್ಮಗಳು ಪೂರ್ತಿ ಇದ್ದವೆಂದು ಹೇಳಬಹುದು. ದ್ವಾಪರ ಯುಗದಲ್ಲಿ ಬಲವನ್ನು ಬೆಳೆಸಿಕೊಳ್ಳುತ್ತಾ ಬಂದಿರುವ ಅಜ್ಞಾನ ತನ್ನ ಆಯುಧಗಳಾದ ಅಧರ್ಮಗಳನ್ನು ಪ್ರಜೆಗಳಲ್ಲಿ ಪೂರ್ತಿ ಹರಡುವಂತೆ ಮಾಡಿದೆ. ಒಂದು ವಿಧವಾದ ಪ್ರಜೆಗಳೇ ಅಲ್ಲದೆ ದೊಡ್ಡವರಾದ ಸನ್ಯಾಸಿಗಳು, ಮಹರ್ಷಿಗಳಾದವರು ಕೂಡಾ ಅಜ್ಞಾನ ಮಾರ್ಗದೊಳಗೆ ತಿಳಿಯದೆಯೇ ಪ್ರವೇಶಿಸಿ ಅದನ್ನೇ ತಪ್ಪಾಗಿ ಅರ್ಥೈಸಿಕೊಂಡು ಜ್ಞಾನಮಾರ್ಗ ಎಂದುಕೊಂಡಿದ್ದಾರೆ. ಮನುಷ್ಯ ಶರೀರದಲ್ಲಿನ ಗುಣಗಳ ಮಾಯೆ ಆ ವಿಧವಾಗಿ ಎಲ್ಲರನ್ನು ಭ್ರಮಿಸುವಂತೆ ಮಾಡುವುದರಿಂದ, ತಮ್ಮದು ಜ್ಞಾನವೇ ಎನ್ನುವಂತೆ ಮುಂದಕ್ಕೆ ಹೋಗುತ್ತಿದ್ದರು. ಕಲಿಯುಗ ಪ್ರಾರಂಭದಲ್ಲಿ ಬ್ರಾಹ್ಮಣರು ಅತ್ಯಂತ ಧನಿಕರಾಗಿ ಬದಲಾಗಿಹೋಗಿದ್ದಾರೆ. ಭೂಮಿಮೇಲೆ ಅವರಂತೆ ಹಣ ಸಂಪಾದಿಸುವವರು ಇಲ್ಲ. ಹಾಗೇ ಅವರಂತೆ ಹಣ ಖರ್ಚುಮಾಡುವವರು ಇಲ್ಲ. ಸುಖವಂತವಾದ ಜೀವನಕ್ಕಾಗಿ ಧನವನ್ನು ವಿಪರೀತವಾಗಿ ಖರ್ಚು

ಮಾಡುತ್ತಾ ರಾಜರು ಅನುಭವಿಸದ ಸುಖಗಳನ್ನು ಕೂಡಾ ಅನುಭವಿಸುತ್ತಿದ್ದರು. ಅತ್ಯಂತ ರುಚಿಕರವಾದ ಪದಾರ್ಥಗಳನ್ನು ತಿನ್ನುವವರಲ್ಲಿ ಬ್ರಾಹ್ಮಣರೇ ಮೊದಲನೆಯವರಾಗಿ ಇರುತ್ತಿದ್ದರು. ತುಪ್ಪವನ್ನು ಹೆಚ್ಚಾಗಿ ಬಳಸುತ್ತಿದ್ದರು. ಎಷ್ಟು ಹಣ ಖರ್ಚು ಮಾಡಿಯಾದರೂ ತುಪ್ಪ ಅನ್ನ ತಿನ್ನುತ್ತಿದ್ದರು.

ಈ ವಿಧವಾಗಿ ವಿಲಾಸ ಜೀವನಗಳಿಗೆ ಅಭ್ಯಾಸವಾದವರಲ್ಲಿ ಬ್ರಾಹ್ಮಣರು ಹೊರತು ಇತರರು ಯಾರೂ ಇಲ್ಲ. ಹೀಗೆ ಬದುಕುತ್ತಿರುವ ಬ್ರಾಹ್ಮಣರು ಇತರರಿಗೆ ಬೋಧಿಸುವ ವೃತ್ತಿಯನ್ನು ತಾವೇ ಸಾಗಿಸಬೇಕೆಂದುಕೊಂಡಿದ್ದಾರೆ. ಬೋಧಿಸುವ ವೃತ್ತಿಯಿಂದ ಸುಖ ಜೀವನ ಇದೆಯೆಂದು ಆದ್ದರಿಂದ ಭೂಮಿ ಮೇಲೆ ಸುಖ ಜೀವನ ತಮ್ಮದೇ ಆಗಬೇಕೆಂದು, ಇತರರಿಗೆ ಅದು ದಕ್ಕಬಾರದೆಂದು ತಿಳಿದ ಬ್ರಾಹ್ಮಣರು ಬೋಧಾನಾ ವೃತ್ತಿಯೊಳಗೆ ಯಾರನ್ನು ಬರಲು ಬಿಡುತ್ತಿರಲಿಲ್ಲ. ತ್ರೇತಾಯುಗದಿಂದ ಸ್ವಲ್ಪ ಸ್ವಲ್ಪವಾಗಿ ಇದ್ದ ಯಜ್ಞಗಳನ್ನು ಎಲ್ಲರಿಂದ ಮಾಡಿಸುತ್ತಿದ್ದರು. ವೇದಗಳು ತಾವು ಹೊರತು ಇತರರು ಓದುವುದು ಅಪರಾದವಾಗಿ ತೋರಿಸುತ್ತಾ ಯಾರಾದರೂ ತಮ್ಮಂತೆ ಬೋಧಕರಾಗಿ ಬದಲಾದರೇ ಅವನು ವೇದಗಳು ಓದಿದ್ದಾನೆಂದು, ಶೂದ್ರರು ವೇದಗಳು ಓದಬಾರದೆಂದು ರಾಜರಿಂದ ಶಿಕ್ಷೆಗಳು ಹಾಕಿಸುತ್ತಿದ್ದರು. ವೇದಗಳು ಓದಿದವನಿಗೆ ನಾಲಿಗೆ ಕತ್ತರಿಸಿದ ಶಿಕ್ಷೆಗಳು ಅನೇಕ ಹಾಕಿಸಿದ್ದಾರೆ. ದಾನಗಳು ತಮಗೇ ಕೊಡಬೇಕೆನ್ನುವ ನಿಯಮವನ್ನು ಏರ್ಪಡಿಸಿದ್ದಾರೆ. ಧ್ಯಾನ ಕೂಡಾ ಪ್ರಜೆಗಳ ಒಳಿತಿಗಾಗಿ ನಾವೇ ಮಾಡುತ್ತಿದ್ದೇವೆಂದು ಪ್ರಚಾರ ಮಾಡಿದ್ದಾರೆ. ಭಗವದ್ಗೀತೆಯಲ್ಲಿ ಅಧರ್ಮಗಳೆಂದು ಬೋಧಿಸಿದ ಯಜ್ಞ, ವೇದ, ದಾನ, ತಪಸ್ಸುಗಳನ್ನು ಚೆನ್ನಾಗಿ ಪ್ರೋತ್ಸಾಹಿಸಿ ಅವುಗಳ ಮೂಲಕ ಚೆನ್ನಾಗಿ ಲಾಭವನ್ನು ಹೊಂದಿದ್ದಾರೆ.

ದ್ವಾಪರ ಯುಗದಲ್ಲಿಯೂ, ಕಲಿಯುಗದಲ್ಲಿಯೂ ಹೆಚ್ಚಾಗಿ ರಾಜರನ್ನು ಯಜ್ಞಗಳ ಕಡೆ ಮರಳಿಸಿದ್ದಾರೆ. ಪ್ರತಿ ಕಾರ್ಯ ನೆರವೇರುವುದಕ್ಕೆ ಯಜ್ಞ ಮಾಡಬೇಕೆಂದು ಸೂಚನೆಗಳು ಕೊಡುತ್ತಿದ್ದರು. ಸಂತತಿ ಕೂಡಾ ಯಜ್ಞಗಳಿಂದ ಉಂಟಾಗುತ್ತದೆಂದು ಬೋಧಿಸಿದವರು ಬ್ರಾಹ್ಮಣರೇ. ಈ ವಿಧವಾಗಿ ಬೋಧನಾ

ವೃತ್ತಿಯನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡು ಸರ್ವ ಭೋಗಗಳನ್ನು ಅನುಭವಿಸುತ್ತಿದ್ದರು. ಸುಖವಂತವಾದ ಜೀವನವನ್ನು, ರುಚಿಕರವಾದ ಆಹಾರಗಳನ್ನು ತಿನ್ನುವುದರಲ್ಲಿ ಅವರೇ ಮೊದಲನೆಯವರಾಗಿ ಭೂಮಿಮೇಲೆ ಭೋಜನಪ್ರಿಯರೆಂದು ಹೆಸರು ತಂದುಕೊಂಡಿದ್ದಾರೆ. ಅತ್ಯಂತ ಸುಖ ಭೋಜನ ಪ್ರಿಯರು ಅವರೇ ಆಗಿದ್ದರು. ಈ ದಿನ ಸುಖ ಭೋಜನಕ್ಕಾಗಿಯೇ ಅವರ ಆಸ್ತಿಗಳನ್ನು ಕೂಡಾ ಸುಲಭವಾಗಿ ಕಳೆದುಕೊಂಡು ಈ ದಿನ ಆಸ್ತಿಗಳು ಇಲ್ಲದವರಾಗಿ ಉಳಿದುಹೋಗಿದ್ದಾರೆ. ಆದರೂ ಈ ದಿನ ಕೂಡಾ ಅವರು ಸುಖ ಜೀವನಕ್ಕಾಗಿಯೇ ಒದ್ದಾಡುತ್ತಿದ್ದಾರೆ. ಇಂದಿನ ಪರಿಸ್ಥಿತಿ ಹೇಗಿದ್ದರೂ ಪೂರ್ವದಲ್ಲಿ ದ್ವಾಪರಯುಗದಲ್ಲಿಯೂ, ದ್ವಾಪರಯುಗ ಕಳೆದ ನಂತರ ಕೂಡಾ ಬ್ರಾಹ್ಮಣರೇ ಮನುಷ್ಯರಲ್ಲಿ ಉತ್ತಮರಾಗಿ ಚಲಾವಣೆ ಆಗುತ್ತಾ ಬಂದಿದ್ದಾರೆ.

ದ್ವಾಪರಯುಗದ ಕೊನೆಯಲ್ಲಿ ತಯಾರಾದ ಭಗವದ್ಗೀತೆ ಬ್ರಾಹ್ಮಣರಿಗೆ ಪೂರ್ತಿ ವಿರುದ್ಧವಾಗಿ ಇದೆಯೆಂದು ತಿಳಿದವರಾಗಿ ಭಗವದ್ಗೀತೆಗಿಂತ ವೇದಗಳೇ ಮುಖ್ಯವೆಂದು, ಹಿಂದೂಗಳ ದೃಷ್ಟಿಯೆಲ್ಲವನ್ನು ವೇದಗಳಕಡೆ ಮರಳಿಸಿ ಭಗವದ್ಗೀತೆ ಕಡೆ ಹೋಗದಂತೆ ಮಾಡಿದ್ದಾರೆ. ವೇದಗಳನ್ನು ಕೂಡಾ ಬ್ರಾಹ್ಮಣರೇ ಓದಬೇಕೆಂದು ಅತ್ತ ವೇದಗಳನ್ನು ಓದಲು ಬಿಡದೆ, ಇತ್ತ ಭಗವದ್ಗೀತೆಯನ್ನು ಓದಲು ಬಿಡದೆ ಪ್ರಜೆಗಳನ್ನು ಜ್ಞಾನದಕಡೆ ಹೋಗದಂತೆ ಅಜ್ಞಾನದಲ್ಲಿಯೇ ಇರುವಂತೆ ಮಾಡಿದ್ದಾರೆ. ಒಂದುಕಡೆ ನಾವು ಪುರೋಹಿತರೆಂದು, ಪೌರರಿಗೆ (ಪ್ರಜೆಗಳಿಗೆ) ಹಿತವನ್ನು ಮಾಡುವವರೆಂದು ಹೇಳುತ್ತಾ ಪ್ರಜೆಗಳಿಗೆ ಕೆಟ್ಟದನ್ನೇ ಬೋಧಿಸುತ್ತಾ ಒಳ್ಳೆಯದನ್ನು ಬೋಧಿಸುವಂತೆ ನಟಿಸುತ್ತಿದ್ದರು. ಯಾರಾದರೂ ಭಗವದ್ಗೀತೆಯನ್ನು ಓದುತ್ತಾರೇನೊಯೆಂದು, ಅದರಲ್ಲಿನ ಜ್ಞಾನವನ್ನು ತಿಳಿಯುತ್ತಾರೇನೊ ಎಂದು ತಿಳಿದು ಭಗವದ್ಗೀತೆಯನ್ನು ಮನೆಯಲ್ಲಿ ಇಟ್ಟುಕೊಳ್ಳುವುದು ಒಳ್ಳೆಯದಲ್ಲವೆಂದು, ಪ್ರಜೆಗಳು ಭಗವದ್ಗೀತೆಯನ್ನು ಓದಬಾರದೆಂದು, ಭಗವದ್ಗೀತೆ ದೇವಾಲಯಗಳಲ್ಲಿ ಇರಬೇಕೆಂದು, ಭಗವದ್ಗೀತೆಯನ್ನು ಬ್ರಾಹ್ಮಣರಿಂದಲೇ ಓದಿಸಿಕೊಳ್ಳಬೇಕೆಂದು ಹೇಳುತ್ತಾ ಬಂದಿದ್ದಾರೆ. ಹಾಗಲ್ಲದೆ ಭಗವದ್ಗೀತೆಯನ್ನು ಯಾರು ಮನೆಯಲ್ಲಿ

ಇಟ್ಟುಕೊಂಡರೂ ಅವರ ಮನೆಯಲ್ಲಿ ಅಶುಭಗಳು ನಡೆಯುತ್ತವೆಯೆಂದು, ಕಲಹಗಳು ಉಂಟಾಗುತ್ತವೆಂದು ಬೋಧಿಸಿದರು. ಅಷ್ಟೇ ಅಲ್ಲದೆ ಭಗವದ್ಗೀತೆ ಚಿತ್ರಪಟವನ್ನು ಸಹಿತ ಯಾರೂ ಮನೆಯಲ್ಲಿ ಇಟ್ಟುಕೊಳ್ಳಬಾರದೆಂದು ಬೋಧಿಸಿದ್ದಾರೆ.

ದ್ವಾಪರಯುಗದ ಕೊನೆಯಲ್ಲಿ ಬಂದಿರುವ ಭಗವದ್ಗೀತೆಯನ್ನು ಕೃಷ್ಣನು ಹೇಳಿದಾಗ ವ್ಯಾಸನು ಅದನ್ನು ಗ್ರಂಥರೂಪವಾಗಿ ಬರೆಯುವುದಕ್ಕೆ ಸುಮಾರು ಎರಡು ವರ್ಷಗಳು ಹಿಡಿಸಿದೆ. ಆದರೂ ಅದು ಪ್ರಜೆಗಳೊಳಗೆ ಬಂದು ಇದು ಭಗವದ್ಗೀತೆಯೆಂದು ತಿಳಿಯುವುದಕ್ಕೆ ಸುಮಾರು ಹತ್ತು ವರ್ಷಗಳ ಕಾಲ ಬೇಕಾಗಿದೆಯೆಂದು ಅಂದುಕೊಳ್ಳುತ್ತೇನೆ. ಆಗ ಕೈಯಿಂದ ಬರೆದ ಒಂದು ಪ್ರತಿಯನ್ನು ಯಾರೋ ಒಬ್ಬರು ನೋಡಿದ್ದಾರೆ ಹೊರತು ಪ್ರಜೆಗಳೆಲ್ಲರೂ ಈ ದಿನದಂತೆ ಭಗವದ್ಗೀತೆಯನ್ನು ನೋಡಲಿಲ್ಲ. ಭಗವದ್ಗೀತೆಯನ್ನು ಬರೆದ ವ್ಯಾಸನು ಮರಣಿಸಿದ ನಂತರ ವ್ಯಾಸನು ಬರೆದ ಭಗವದ್ಗೀತೆ ಶಿಥಿಲಾವಸ್ಥೆಗೆ ಬಂದರೇ, ಅದನ್ನು ಕೆಲವು ಪ್ರತಿಗಳಾಗಿ ಬರೆದವರು ಬ್ರಾಹ್ಮಣರೇ. ಆ ದಿನಗಳಲ್ಲಿ ಓದು ಬಂದವರು ಅವರೇ ಆಗಿರುವುದರಿಂದ ಅವರೇ ಭಗವದ್ಗೀತೆಯನ್ನು ಕೆಲವು ಪ್ರತಿಗಳಾಗಿ ಬರೆದಿದ್ದಾರೆ. ಹಾಗೆ ಎರಡನೆಸಲ ಪ್ರತಿಗಳ ರೂಪದೊಳಗೆ ಬರೆಯುವಾಗ ಬ್ರಾಹ್ಮಣರಿಗೆ ಅನುಕೂಲವಾದ ಶ್ಲೋಕಗಳನ್ನು ಕಲ್ಪಿಸಿ ಬರೆದು ಭಗವದ್ಗೀತೆಯಲ್ಲಿ ಸೇರಿಸುವುದು ನಡೆದಿದೆ. ಆ ವಿಷಯ ಇಂದಿಗೂ ಯಾರಿಗೂ ತಿಳಿದಿಲ್ಲ. ಹೀಗೆ ಭಗವದ್ಗೀತೆಯಲ್ಲಿ ಕಲ್ಪಿತ ಶ್ಲೋಕಗಳನ್ನು ಬರೆದವರು, ಇರುವ ಶ್ಲೋಕಗಳನ್ನು ತೆಗೆದುಹಾಕುವ ಸಾಹಸ ಮಾಡಲಿಲ್ಲ. ಒಂದುವೇಳೆ ತೆಗೆದುಹಾಕಿದರೆ ತಮಗೆ ಏನಾದರೂ ಕೆಟ್ಟದ್ದು ನಡೆಯುತ್ತದೇನೊಯೆಂದು ಭಯಪಟ್ಟು ಶ್ಲೋಕಗಳನ್ನು ತೆಗೆದುಹಾಕಲಿಲ್ಲ ಆದರೆ ಶ್ಲೋಕಗಳನ್ನು ಅದರಲ್ಲಿ ಬೆರೆಸಿದ್ದಾರೆ.

ಈ ಮಧ್ಯಕಾಲದಲ್ಲಿ ನಾವು ಬರೆದ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯಲ್ಲಿ ಕಲ್ಪಿತ ಶ್ಲೋಕಗಳನ್ನು ಹೊರಗಿಟ್ಟಿದ್ದೇವೆ. ದ್ವಾಪರಯುಗದ ನಂತರ ಕಲಿಯುಗದಲ್ಲಿ ಕೂಡಾ ಬೋಧನೆಯ ಪದ್ಧತಿಯನ್ನು ತಮ್ಮ ಕೈಗಳಲ್ಲಿ ಇಟ್ಟುಕೊಂಡ

ಬ್ರಾಹ್ಮಣರು ಭಗವದ್ಗೀತೆಗೆ ಭಾವವನ್ನು, ವಿವರವನ್ನು ಬರೆದಿದ್ದಾರೆ. ಆಗ ಅದರ ಭಾವನೆಗಳನ್ನು ಅವರಿಗೆ ಅನುಕೂಲವಾಗಿ ಬರೆದುಕೊಂಡಿದ್ದಾರೆ. ಶ್ಲೋಕದಲ್ಲಿ ಆ ವಿಷಯವನ್ನು ಹೇಳದಿದ್ದರೂ ಬ್ರಾಹ್ಮಣರೇ ಕಲ್ಪಿಸಿ ಬರೆಯುವುದರಿಂದ ಬ್ರಹ್ಮವಿದ್ಯೆಯನ್ನು ಸ್ವಲ್ಪವಾದರೂ ತಿಳಿಯದವರು, ಅವರು ಬರೆದಿರುವುದೇ ಸತ್ಯವೆಂದು ಓದಿಕೊಳ್ಳುವುದರಿಂದ ದೇವರು ಹೇಳಿದ ಜ್ಞಾನಕ್ಕೆ ದೂರವಾಗಿ ಹೋಗಿದ್ದಾರೆ ಹೊರತು ಹತ್ತಿರ ಆಗಲಿಲ್ಲ. ಕಲಿಯುಗ ಪ್ರಾರಂಭದಿಂದ ತಾವು ಅಭಿವೃದ್ಧಿಯಾಗುವುದಕ್ಕೆ ಅನೇಕವಾದ ವಿಧಾನಗಳು ಆಚರಿಸುತ್ತಾ ಪ್ರಜೆಗಳನ್ನು ತಪ್ಪು ದಾರಿಹಿಡಿಸಿ ಭವಿಷ್ಯತ್ತಿನಲ್ಲಿ ತಮಗೆ ಯಾರೂ ಪೋಟಿಗೆ ಬರದಂತೆ ಮಾಡಿಕೊಂಡಿದ್ದಾರೆ. ಹಿಂದೂಗಳಿಗೆ ಮುಖ್ಯವಾದ ಜ್ಞಾನ ಇರುವುದು ಭಗವದ್ಗೀತೆಯಾಗಿದ್ದು ಅದರೊಂದಿಗೆ ಹಿಂದೂಗಳಿಗೆ ಸಂಬಂಧವಿಲ್ಲ. ಹಿಂದೂಗಳಿಗೆ ವೇದಗಳೇ ಪ್ರಮಾಣಗಳು ಎಂದು ಹೇಳಿದ್ದಾರೆ. ಆ ವೇದಗಳು ತಿಳಿಯಬೇಕೆಂದರೆ ನಾವು ಹೇಳಬೇಕಾಗಿದ್ದೆ ಹೊರತು ಸ್ವತಃವಾಗಿ ಯಾರೂ ಓದಬಾರದೆಂದು ನಿಯಮವನ್ನು ಇಟ್ಟಿದ್ದಾರೆ.

ಮುಸ್ಲಿಮ್ ಹಿರಿಯರು ಬ್ರಾಹ್ಮಣರನ್ನು ನೋಡಿ ಕಲಿತುಕೊಂಡಂತೆ ತಾವು ಹೇಗೆ ಹೇಳಿದರೆ ಹಾಗೆ ನಡೆದುಕೊಳ್ಳಬೇಕೆಂದು ಮುಸ್ಲಿಮ್‌ರಿಗೆ ಷರಿಯತ್ ಎನ್ನುವ ನಿಯಮವನ್ನು ಇಟ್ಟಂತೆ, ಹಿಂದೂಗಳಲ್ಲಿ ಕೂಡಾ ಹಿಂದೂ ಹಿರಿಯರೆಂದು ಹೆಸರುವಾಸಿಯಾದ ಬ್ರಾಹ್ಮಣರು ಹಿಂದೂ ಷರಿಯತ್ ಎನ್ನುವಂತೆ ಭಗವದ್ಗೀತೆಯನ್ನು ಓದಬಾರದು, ವೇದಗಳನ್ನು ಓದಬಾರದೆನ್ನುವ ನಿಯಮವನ್ನು ಇಟ್ಟಿದ್ದಾರೆ. ವೇದಗಳನ್ನು ಹೆಂಗಸರು ಓದಬಾರದೆಂದು ಹೇಳಿ ತಮ್ಮ ಮನೆಯಲ್ಲಿನ ಬ್ರಾಹ್ಮಣ ಸ್ತ್ರೀಯರನ್ನು ಕೂಡಾ ವೇದಗಳಿಗೆ ದೂರವಾಗಿ ಇಟ್ಟಿದ್ದಾರೆ. "ಬ್ರಾಹ್ಮಣ ಸ್ತ್ರೀಯರು ವೇದಗಳು ಓದಿದರೆ ತಾವು ಮಾಡುತ್ತಿರುವ ಸಾಮಾಜಿಕ ತಪ್ಪು ಹೊರಬೀಳುತ್ತದೆಂದು ತಮ್ಮ ಸ್ತ್ರೀಯರನ್ನು ಸಹಿತ ವೇದಗಳಿಗು, ಭಗವದ್ಗೀತೆಗು ದೂರವಾಗಿ ಇಟ್ಟಿದ್ದಾರೆ. ಅವರ ಮನೆಗಳಲ್ಲಿ ಕೂಡಾ ಸ್ತ್ರೀಯರಿಗೆ ಸ್ವಲ್ಪವೂ ಸ್ವತಂತ್ರ ಕೊಡಲಿಲ್ಲ. ಸ್ತ್ರೀಯರನ್ನು ಬಹಳ ಕಡಿಮೆ ಭಾವನೆಯಿಂದ ನೋಡುವ

ಅಭ್ಯಾಸ ಬ್ರಾಹ್ಮಣರಿಗೆ ಮೊದಲಿನಿಂದ ಇದೆ. ಅವರ ಮನೆಯಲ್ಲಿ ಗಂಡ ಸತ್ತುಹೋದ ಸ್ತ್ರೀಗೆ ತಲೆ ಬೋಳಿಸಿ ಅಂದಹೀನ ಮಾಡಿ, ಕುಜ ಗ್ರಹ ಬಣ್ಣವಾದ ಕೆಂಪು ವಸ್ತ್ರವನ್ನು ಕಟ್ಟಿಸುತ್ತಿದ್ದರು. ಈ ಮಧ್ಯ ಕಾಲದಲ್ಲಿ ಅಂತಹವರು ಕಡಿಮೆಯಾಗಿ ಕಾಣಿಸಿದರೂ ಕಳೆದ ಮೂವತ್ತು, ನಲವತ್ತು (30, 40) ವರ್ಷಗಳ ಕೆಳಗಿನವರೆಗು ಬ್ರಾಹ್ಮಣ ಮನೆಗಳಲ್ಲಿ ಗಂಡ ಸತ್ತವರು ಕೆಂಪುಸೀರೆ ಉಟ್ಟುಕೊಂಡು ಕಾಣಿಸುತ್ತಿದ್ದರು. ಅವರಿಗೆ ಜ್ಯೋತಿಷ್ಯ ತಿಳಿಯುವುದರಿಂದ ಕೆಂಪು ಬಣ್ಣ ಕುಜಗ್ರಹದ ಬಣ್ಣವೆಂದು ತಿಳಿದು ಕೆಂಪುಬಣ್ಣ ವಸ್ತ್ರ ಕಟ್ಟಿಕೊಂಡರೆ ಕುಜಗ್ರಹ ದೃಷ್ಠಿ ಅವರ ಮೇಲೆಬಿದ್ದು ಅವರು ಕುಜದೋಷ ಇರುವವರಾಗಿ ಪುರುಷರಿಗೆ ದೂರವಾಗಿ ಇರುತ್ತಾರೆಂದು, ಪುರುಷರ ಆಲೋಚನೆಗಳು ಅವರೊಳಗೆ ಬರುವುದಿಲ್ಲವೆಂದು ತಿಳಿದು ಹಾಗೆ ಕೆಂಪುಬಣ್ಣ ಸೀರೆಯನ್ನು ಕಟ್ಟಿಸುತ್ತಿದ್ದರು. ತಲೆ ಬೋಳಿಸಿ, ಅಂದಹೀನ ಮಾಡುವುದಲ್ಲದೇ ಅವರ ಮುಖವನ್ನು ಯಾರೂ ನೋಡ ಬಾರದೆಂದು ವಿಧವೆ (ಮುಂಡೆ) ಯಾದ ಬ್ರಾಹ್ಮಣ ಸ್ತ್ರೀ ಮುಖ ನೋಡಿದರೆ ಎಲ್ಲಾ ಅನಿಷ್ಟಗಳು ಉಂಟಾಗುತ್ತವೆಯೆಂದು, ಅವರೇ ಹೇಳಿರುವುದರಿಂದ ವಿಧವೆ ಬ್ರಾಹ್ಮಣ ಸ್ತ್ರೀಯರ ಮುಖವನ್ನು ನೋಡುವುದಕ್ಕೆ ಎಲ್ಲರೂ ಭಯಪಡುತ್ತಿದ್ದರು. ಹಾಗೆ ಭಯವನ್ನು ಕಲ್ಪಿಸಿ ಭವಿಷ್ಯತ್ತಿನಲ್ಲಿ ಅವರನ್ನು ಯಾರೂ ನೋಡದಂತೆ ಮಾಡಿಟ್ಟಿದ್ದಾರೆ. ಈ ವಿಧವಾಗಿ ತಮ್ಮ ಕುಲದಲ್ಲಿನ ಸ್ತ್ರೀಯರನ್ನು ಕೂಡಾ ಬಹಳ ಕಡಿಮೆ ಭಾವನೆಯಿಂದ ನೋಡುತ್ತಿದ್ದರು. ಉಳಿದ ಕುಲಗಳಲ್ಲಿ ಕೂಡಾ ಗಂಡ ಸತ್ತುಹೋದ ಸ್ತ್ರೀಯರ ಮುಖವನ್ನು ನೋಡಿದರೆ ಕೆಟ್ಟದ್ದು ನಡೆಯುತ್ತ ದೆಂದು ಹೇಳುತ್ತಾ ಉಳಿದ ಕುಲಗಳಲ್ಲಿ ಮುಂಡೆ (ವಿಧವೆ) ಯಾದವರು ಬಿಳಿ ಸೀರೆ ಉಡುವಂತೆ ಮಾಡಿದ್ದಾರೆ.

**ಪ್ರಶ್ನೆ :– ಬ್ರಾಹ್ಮಣರಲ್ಲಿ ಗಂಡ ಸತ್ತುಹೋದ ವಿಧವೆ ಸ್ತ್ರೀಗೆ ಕೆಂಪುಸೀರೆಯನ್ನು ಉಡಿಸಿ, ಉಳಿದ ಕುಲಗಳ ವಿಧವೆ ಸ್ತ್ರೀಯರಿಗೆ ಬಿಳಿಸೀರೆ ಉಡಿಸುವುದರಲ್ಲಿ ಅಂತರ್ಯ ಏನಾದರೂ ಇದೆಯಾ?**

**ಉತ್ತರ :–** ಇರುವುದು ಇದ್ದಂತೆ ಹೇಳೆನ್ನುತ್ತೀಯಾ? ಸ್ವಲ್ಪ ಬಚ್ಚಿಟ್ಟು ಹೇಳೆನ್ನುತ್ತೀಯಾ? ಇರುವುದು ಇದ್ದಂತೆ ಹೇಳಿದರೆ ನಂಬುವುದಿಲ್ಲವೇನೊ?

**ಪ್ರಶ್ನೆ :– ಇದ್ದದ್ದು ಇದ್ದಂತೆ ಹೇಳೆನ್ನುತ್ತೇವೆ. ಸತ್ಯವಾದುದನ್ನು ನಂಬಿ ತೀರಬೇಕಾಗಿದ್ದೆ ಅಲ್ಲವೆ! ಬಚ್ಚಿಡದಂತೆ ಹೇಳಿರಿ.**

**ಉತ್ತರ :–** ಇದು ಒಂದು ಕುತಂತ್ರ ಪೂರಿತವಾದ ಕೆಲಸ. ಬ್ರಾಹ್ಮಣರು ಜ್ಯೋತಿಷ್ಯ ತಿಳಿದವರಾಗಿರುವುದರಿಂದ ಯಾವಯಾವ ಗ್ರಹಗಳು ಯಾವಯಾವ ಫಲಿತಗಳನ್ನು ಕೊಡುತ್ತವೊ ಅವರಿಗೆ ಚೆನ್ನಾಗಿ ತಿಳಿದಿದೆ. ಕುಜಗ್ರಹ, ಶುಕ್ರಗ್ರಹ ಎರಡು ವಿರುದ್ಧವಾದ ಗ್ರಹಗಳು. ಶುಕ್ರನು ಬಿಳಿಬಣ್ಣ ಇರುವವನು, ಕುಜನು ಕೆಂಪುಬಣ್ಣ ಇರುವವನು. ಶುಕ್ರನು ಸ್ತ್ರೀ ಸುಖಗಳಿಗೆ ಅನುಕೂಲನು. ಕುಜನು ಸ್ತ್ರೀ ಸುಖಗಳಿಗೆ ವಿರೋಧಿ. ಕುಜದೋಷ ಇರುವವನಿಗೆ ಮದುವೆ ಆಗುವುದು ಕೂಡಾ ಕಷ್ಟವೇ. ಒಂದುವೇಳೆ ಮದುವೆ ಆದರೂ ಗಂಡಹೆಂಡಿರ ಮಧ್ಯೆ ಹೊಂದಿಕೆ ಕಡಿಮೆ ಇರುತ್ತದೆ. ಒಬ್ಬರಿಗೊಬ್ಬರು ಘರ್ಷಣೆ ಬೀಳುತ್ತಾ ಯೌವನವನ್ನು ಕಾಡಿನಲ್ಲಿ ಕಾದ ಬೆಳದಿಂಗಳಿನಂತೆ ಮಾಡಿಕೊಳ್ಳುತ್ತಾರೆ. ಆದ್ದರಿಂದ ಕುಜದೋಷ ಇರುವವರಿಗೆ ಯಾರೂ ಹುಡುಗಿಯನ್ನು ಕೂಡಾ ಕೊಡುವುದಿಲ್ಲ. ಕುಜಗ್ರಹ ಶರೀರ ಸುಖಗಳ ಮೇಲೆ ಧ್ಯಾಸವಿಲ್ಲದಂತೆ ಮಾಡುತ್ತದೆ. ಆದ್ದರಿಂದ ಗಂಡ ಸತ್ತುಹೋದ ಬ್ರಾಹ್ಮಣ ಸ್ತ್ರೀಗೆ ಕುಜಗ್ರಹಕ್ಕೆ ಸಂಬಂಧಿಸಿದ ಬಣ್ಣವಾದ ಕೆಂಪುಬಣ್ಣದ ಸೀರೆಯನ್ನು ಕಟ್ಟಿಸುತ್ತಿದ್ದರು. ಅದರಿಂದ ಅವರಿಗೆ ಪುರುಷ ಧ್ಯಾಸ ಬರುವುದಿಲ್ಲವೆಂದು, ಬಂದರೂ ಕುಜಗ್ರಹ ಬಣ್ಣದ ಸೀರೆ ಧರಿಸಿರುವುದರಿಂದ ಪುರುಷ ಸುಖಗಳಿಗೆ ದೂರವಾಗಿ ಇರಿಸುತ್ತದೆಂದು ಆದ್ದರಿಂದ ಬ್ರಾಹ್ಮಣ ಸ್ತ್ರೀಯರು ಗಂಡ ಮರಣಿಸಿದ ನಂತರ ತಪ್ಪುದಾರಿ ಹಿಡಿಯದಂತೆ ಇರುತ್ತಾರೆಂದು, ಎಲ್ಲಿಯೂ ಅವರಿಗೆ ಕೆಟ್ಟಹೆಸರು ಬರದಂತಿರುವುದಕ್ಕೆ, ಎಲ್ಲಿಯೂ ತಪ್ಪು ನಡೆಯದಂತಿರುವುದಕ್ಕೆ ಅವರ ಸ್ತ್ರೀಯರಿಗೆ ಕೆಂಪುಸೀರೆಗಳು ಧರಿಸುವಂತೆ ಮಾಡುತ್ತಿದ್ದಾರೆ.

ಜ್ಯೋತಿಷ್ಯ ತಿಳಿದ ಬ್ರಾಹ್ಮಣರಿಗೆ ಈ ವಿಷಯಗಳೆಲ್ಲವೂ ಚೆನ್ನಾಗಿ ಗೊತ್ತು. ಆದ್ದರಿಂದ ಅವರ ಮನೆಯಲ್ಲಿ ವಿಧವೆ ಸ್ತ್ರೀಯರಿಗೆ ಕೆಂಪುಬಣ್ಣದ

ಸೀರೆಯನ್ನು ಕಟ್ಟಿಸುತ್ತಿದ್ದರು. ಅದೇ ಇತರೆ ಕುಲಗಳಲ್ಲಿ ಗಂಡ ಸತ್ತುಹೋದ ವಿಧವೆ ಸ್ತ್ರೀಗೆ ಬಿಳಿಸೀರೆ ಉಡಿಸುತ್ತಿದ್ದರು. ಬಿಳಿಸೀರೆ ಧರಿಸಬೇಕೆಂದು ಬ್ರಾಹ್ಮಣರು ಹೇಳುವುದರಿಂದ ಅವರ ಮಾತನ್ನು ದೊಡ್ಡದಾಗಿ ಉಳಿದ ಕುಲದವರೆಲ್ಲರೂ ತಿಳಿಯುವುದರಿಂದ ಅವರು ಹೇಳಿದಂತೆ ಬಿಳಿಸೀರೆಯನ್ನು ಧರಿಸುತ್ತಿದ್ದರು. ಈ ಕೆಲಸದಲ್ಲಿನ ರಹಸ್ಯವೇನೆಂದರೇ! ಬಿಳಿಬಣ್ಣ ಶುಕ್ರಗ್ರಹದ್ದು. ಶುಕ್ರಗ್ರಹ ಕಳತ್ರ ಕಾರಕನೆಂದು, ಕುಜನು ಯೌವನ ಕಾರಕನೆಂದು ಹೇಳುತ್ತಿರುತ್ತಾರೆ. ಶುಕ್ರ ಗ್ರಹದಿಂದ ಸ್ತ್ರೀಯರಿಗೆ ಪತಿಯ ಸುಖ. ಪತಿಗೆ ಪತ್ನಿಯ ಸುಖಗಳು ಉಂಟಾಗುತ್ತಿರುತ್ತವೆ. ಶುಕ್ರಗ್ರಹ ಅನುಕೂಲವಾಗಿರುವವರಿಗೆ ಸ್ತ್ರೀ ಸುಖಗಳು ಚೆನ್ನಾಗಿರುತ್ತವೆ. ಸ್ತ್ರೀಯರಿಗಾದರೆ ಪುರುಷ ಸುಖಗಳು ಚೆನ್ನಾಗಿರುತ್ತವೆ. ಶುಕ್ರ ಗ್ರಹವೊಂದರ ಫಲಿತವೇ ಹಾಗೆ ಇರುತ್ತದೆ. ಶುಕ್ರ ಗ್ರಹ ಒಂದರ ಬಣ್ಣ ಬಿಳಿದಾದ್ದರಿಂದ ಬಿಳಿಬಣ್ಣ ಸೀರೆ ಉಡುವುದರಿಂದ ಅವರಲ್ಲಿ ಪುರುಷ ಸುಖಗಳ ಜ್ಞಾಪಕಗಳು ಬಂದು, ಆ ಸುಖಗಳನ್ನು ಹೊಂದುವ ಅವಕಾಶವಿದೆ. ಇತರೆ ಕುಲದವರಿಗೆ ಬಿಳಿಸೀರೆ ಉಡುವುದರಿಂದ ವಿಧವೆಯರಾದರೂ ಎಲ್ಲಿಯೋ ಒಂದುಕಡೆ, ಯಾವುದೊ ಒಂದುವಿಧವಾಗಿ ಅವರು ಪುರುಷರೊಂದಿಗೆ ಸಂಬಂಧ ಹೊಂದುವುದೊ, ಇಲ್ಲವೆ ಪುರುಷ ಸಂಬಂಧ ಆಲೋಚನೆಗಳು ಬರುವುದೊ ನಡೆಯಬೇಕೆಂದು, ಅದರಿಂದ ಉಳಿದ ಕುಲಗಳು ಬ್ರಾಹ್ಮಣ ಕುಟುಂಬಗಳಂತೆ ಪವಿತ್ರವಾಗಿ ಇಲ್ಲದೇ ಹೋಗುತ್ತವೆಂದು, ಅದರಿಂದ ಉಳಿದ ಕುಲಗಳಲ್ಲಿ ಬ್ರಾಹ್ಮಣರಿಗೇ ಹೆಚ್ಚಾಗಿ ಗೌರವವಿರುತ್ತದೆಂದು ತಿಳಿದು ಇತರೆ ಕುಲಗಳ ವಿಧವೆ ಸ್ತ್ರೀಯರಿಗೆ ಬಿಳಿಬಣ್ಣ ಸೀರೆಗಳು, ತಮ್ಮ ಕುಟುಂಬದಲ್ಲಿನ ವಿಧವೆ ಸ್ತ್ರೀಯರಿಗೆ ಕೆಂಪುಬಣ್ಣ ಸೀರೆಯನ್ನು ಕಟ್ಟಿಕೊಳ್ಳುವಂತೆ ಮಾಡಿದ್ದಾರೆ. ಇತರರು ಕೆಟ್ಟುಹೋಗಿ ನಗೆಪಾಟ್ಲಾಗಬೇಕೆಂದು, ತಾವು ಸ್ವಚ್ಛವಾಗಿ ಇರಬೇಕೆಂಬ ಉದ್ದೇಶದಿಂದ ಆ ವಿಧವಾಗಿ ಬಣ್ಣದ ವಸ್ತ್ರಗಳು ನಿರ್ಣಯಿಸಿದ್ದಾರೆ ಎಂದು ಹೇಳದೆ ತಪ್ಪಲಿಲ್ಲ.

ಈ ವಿಧವಾಗಿ ಆಲೋಚನೆಗಳಿರುವ ಬ್ರಾಹ್ಮಣರು ತಾವು ಇತರೆ ಕುಲಗಳಿಗಿಂತ ದೊಡ್ಡಕುಲ ದವರೆನಿಸಿಕೊಳ್ಳಬೇಕೆಂದು, ಇತರೆ ಕುಲಗಳೆಲ್ಲವೂ

ತಮಗಿಂತ ಚಿಕ್ಕ ಕುಲಗಳೆನ್ನುವಂತೆ, ವಿಧವೆಯರ ಸ್ತ್ರೀಯರ ವಿಷಯದಲ್ಲಿ ಒಂದು ಪ್ರಯೋಗವನ್ನು ಮಾಡಿದ್ದಾರೆ. ಬ್ರಾಹ್ಮಣರು ಎಲ್ಲಿದ್ದಾರೋ ಅಲ್ಲೆಲ್ಲಾ ತಮ್ಮದೇ ಅಧಿಪತ್ಯ ಇರಬೇಕೆಂದು ತಿಳಿಯುತ್ತಿದ್ದರು. ಅದರಿಂದ ಅವರಲ್ಲಿ ಇತರೆ ಕುಲಗಳ ಮೇಲೆ ಪೂರ್ತಿ ಕುಲ ವಿವಕ್ಷ ಇದೆ.

ಬ್ರಾಹ್ಮಣರಲ್ಲಿ 'ಕುಲವಿವಕ್ಷ' ಎನ್ನುವುದು ಇಂದಿನದ್ದಲ್ಲ. ಅದಕ್ಕೆ ಹಿಂದೆ ಎಷ್ಟೋ ದೊಡ್ಡ ಚರಿತ್ರೆಯಿದೆ. ತ್ರೇತಾ ಯುಗದಲ್ಲಿಯೇ ಬ್ರಾಹ್ಮಣರು ಕುಲ ವಿವಕ್ಷದಿಂದ ಶೂದ್ರರು ವೇದ ಓದಬಾರದು, ಎಲ್ಲಿಯಾದರೂ ವೇದ ಓದಿದರೆ ಕಾದಿರುವ ಸೀಸವನ್ನು ಬಾಯಲ್ಲಿ ಸುರಿಯುವಂತೆ ರಾಜರಿಂದ ಕಾನೂನನ್ನು ಮಾಡಿಸಿದ್ದಾರೆ. ವೇದವನ್ನು ಓದಿವರಿಗೆ ಅದನ್ನು ಜಾರಿ ಮಾಡಿದ್ದಾರೆ. ತ್ರೇತಾಯುಗದಲ್ಲಿಯೇ ಮನುಷ್ಯರನ್ನು ದೇವತಾ ಪೂಜೆಗಳ ಕಡೆ ಮರಳಿಸಿದ್ದಾರೆ. ಬ್ರಾಹ್ಮಣರಲ್ಲಿ ಯಾರೆ ಆದರೂ, ಯಾವ ದೇವತೆ ಮೇಲೆ ಭಕ್ತಿ ಇಲ್ಲದಿದ್ದರೂ ಭಕ್ತಿ ಇರುವಂತೆ ನಟಿಸುತ್ತಿದ್ದರು. ಹಾಗೆ ನಟಿಸಿ ಇತರೆ ಕುಲದವರೆಲ್ಲರೂ ಅವರಿಂದಲೇ ಆರಾಧನೆಗಳು (ಪೂಜೆಗಳು) ನಡೆಸುವಂತೆ ಮಾಡಿದ್ದಾರೆ. ನಾವು ಪೂಜೆ ಮಾಡಿದರೇನೆ ದೇವತೆಗಳು ಒಪ್ಪಿಕೊಳ್ಳುತ್ತಾರೆಂದು, ಆ ಪೂಜೆಯನ್ನು ಸ್ವೀಕರಿಸುತ್ತಾರೆಂದು ನಂಬಿಸಿದ್ದಾರೆ. ಕೃತಯುಗದಲ್ಲಿ ಸೂರ್ಯನು ಹೇಳಿದ ಜ್ಞಾನ ಇಂತಹದ್ದೆಂದು ಬ್ರಾಹ್ಮಣರಿಗೆ ತಿಳಿದಿದೆ. ಆ ದಿನ ಅದು ಗ್ರಂಥರೂಪದಲ್ಲಿ ಇಲ್ಲದಿದ್ದರೂ ಜ್ಞಾನಸಮಾಚಾರ ಎಲ್ಲರಿಗೂ ತಿಳಿದಿರುತ್ತಿತ್ತು. ಕೃತಯುಗದಲ್ಲಿ ಒಬ್ಬರಿಗೊಬ್ಬರು ಹೇಳಿಕೊಳ್ಳುವುದರಿಂದ ಸೂರ್ಯನು ಮನುವಿಗೆ ಹೇಳಿದ ಜ್ಞಾನ ಎಲ್ಲರಿಗೂ ತಿಳಿದಿರುತ್ತಿತ್ತು. ಕೃತಯುಗದ ಕೊನೆಯಿಂದ ಪ್ರಜೆಗಳು ಅದನ್ನು ಮರೆತುಹೋಗುವುದು ಶುರುಮಾಡಿದ್ದಾರೆ. ತ್ರೇತಾಯುಗ ಪ್ರಥಮ ಭಾಗದಲ್ಲಿಯೇ ಈ ದಿನ ಭಗವದ್ಗೀತೆಯಾಗಿರುವ ಜ್ಞಾನ ಆ ದಿನ ಸೂರ್ಯನು ಹೇಳಿದ ಜ್ಞಾನ ಪ್ರಜೆಗಳೆಲ್ಲರೂ ಮರೆತುಹೋಗಿ ಅಲ್ಲಲ್ಲಿ ಕೆಲವರು ಮಹರ್ಷಿಗಳು, ಬ್ರಾಹ್ಮಣರು ತಿಳಿದಿದ್ದರು.

ಆ ದಿನ ಎಲ್ಲರೂ ಮರೆತುಹೋಗಿರುವ ಜ್ಞಾನವನ್ನೇ ಈದಿನ ಭಗವದ್ಗೀತೆಯಾಗಿ ಕೃಷ್ಣನಿಂದ ಹೇಳಲ್ಪಟ್ಟಿದೆ. ಅಂದಿನದ್ದು ಇಂದಿನದ್ದು ಎರಡೂ ಒಂದೇ ಜ್ಞಾನವಾಗಿರುವುದರಿಂದ ಆ ದಿನ ಬ್ರಾಹ್ಮಣರು ಪ್ರಜೆಗಳನ್ನು ಅದೇ ಕೆಲಸವಾಗಿ ಅಜ್ಞಾನದಕಡೆ ಹೇಗೆ ಮರಳಿಸಿದ್ದಾರೊ ತಿಳಿಯುತ್ತಿದೆ. ಆ ದಿನ ಪ್ರಜೆಗಳಿಗೆ ತಿಳಿಯದ ಜ್ಞಾನ ತಮಗೆ ತಿಳಿದಿರುವುದರಿಂದ ಭಗವದ್ಗೀತೆಯಲ್ಲಿ ಯಾವ ಪದ್ಧತಿಗಳಿಂದ ದೇವರು ತಿಳಿಯುವುದಿಲ್ಲವೆಂದು ಹೇಳಿದ್ದಾರೊ ಆ ಪದ್ಧತಿಗಳನ್ನೇ ಪ್ರಜೆಗಳಿಗೆ ಬೋಧಿಸಿ, ಪ್ರಜೆಗಳನ್ನು ಆ ಪದ್ಧತಿಗಳನ್ನೇ ಆಚರಿಸುವಂತೆ ಮಾಡಿಸಿದ್ದಾರೆ. ಪ್ರಜೆಗಳಿಂದ ಆ ಕೆಲಸಗಳು ಮಾಡಿಸುತ್ತಾ, ಆ ಕೆಲಸಗಳಿಗೆ ಬೇಕಾದ ಖರ್ಚುಗಳೆಲ್ಲ ಪ್ರಜೆಗಳೇ ಇಟ್ಟುಕೊಳ್ಳುವಂತೆ ಮಾಡಿ, ಆ ಆರಾಧನೆಗಳೆಲ್ಲ ತಾವೇ ಮುಂದಿದ್ದು ಪ್ರಜೆಗಳ ಹೆಸರು ಹೇಳಿ, ಪ್ರಜೆಗಳೇ ಈ ಕೆಲಸಗಳು ಮಾಡುತ್ತಿದ್ದಾರೆಂದು ಅವರ ಹೆಸರು, ಮನೆಹೆಸರು, ಗೋತ್ರದ ಹೆಸರು ಹೇಳಿ ತಾವೇ ಮಾಡುತ್ತಾ, ತಾವು ಅವರ ಕೆಲಸವನ್ನು ಮಾಡಿದ್ದಕ್ಕೆ ಪ್ರಜೆಗಳಿಂದ ಹಣವನ್ನು ತೆಗೆದುಕೊಳ್ಳುತ್ತಿದ್ದರು. ಇಂತಹ ಆರಾಧನೆ ಮಾಡಿರೆಂದು ಹೇಳುವುದು ಬ್ರಾಹ್ಮಣರೇ ಆದರೂ ಆ ಕೆಲಸವನ್ನು ನಾವೇ ಮಾಡಿಡಬೇಕೆಂದು, ನೀವು ಮಾಡುವುದಕ್ಕೆ ಅನರ್ಹರೆಂದು ಹೇಳಿ ಆ ಕೆಲಸವನ್ನು ಮಾಡುವುದಕ್ಕೆ ಇಷ್ಟು ಹಣ ಬೇಕೆಂದು ಕೇಳಿ ತೆಗೆದುಕೊಳ್ಳುತ್ತಿದ್ದರು. ಅವರು ತೆಗೆದುಕೊಂಡ ಧನದಿಂದ ಅವರಿಗೆ ಭುಕ್ತಿ ನಡೆದುಹೋದರೂ, ಪ್ರಜೆಗಳು ಮಾತ್ರ ತಪ್ಪುದಾರಿ ಹಿಡಿಯುವುದು ನಡೆಯುತ್ತಿತ್ತು. ಹಾಗೆ ತಪ್ಪುದಾರಿ ಹಿಡಿಸುವುದೇ ನಮ್ಮ ಕೆಲಸ ಎನ್ನುವಂತೆ ತ್ರೇತಾಯುಗದಲ್ಲಿಯೇ ಹಾಗೆ ಮಾಡುವುದಕ್ಕೆ ಶುರುಮಾಡಿ ದ್ವಾಪರ ಯುಗವೆಲ್ಲ ಹಾಗೆಯೇ ಮಾಡಿದ್ದಾರೆ.

ಜ್ಞಾನ ತಿಳಿಯದ ಪ್ರಜೆಗಳು ಯಜ್ಞಗಳಲ್ಲಿ, ದೇವತಾ ಆರಾಧನೆಗಳಲ್ಲಿ ಲಗ್ನವಾಗುವಂತೆ ಮಾಡಿ ದಾನ ಎನ್ನುವುದನ್ನು ಅವರಿಂದ ಪಡೆಯುತ್ತಿದ್ದರು. ಪ್ರಜೆಗಳಿಂದ ಪಡೆಯುವ ಹಣವನ್ನು ಕೋರಿ ತೆಗೆದುಕೊಳ್ಳುತ್ತಾ ಅದಕ್ಕೆ ದಾನ ಎನ್ನುವ ಹೆಸರು ಇಟ್ಟಿದ್ದಾರೆ. ಕೋರದೆಯೇ ಕೊಡುವುದಾದರೆ ದಾನ ಆಗುತ್ತದೆ.

ಹಾಗಲ್ಲದೆ ಈ ಕೆಲಸಕ್ಕೆ ಇಷ್ಟು ಎಂದು ಬೆಲೆ ಇಟ್ಟು ತೆಗೆದುಕೊಂಡಿರುವುದನ್ನು ದಾನ ಎನ್ನುವುದು ಸರಿಯಲ್ಲ. ಆದರೂ ಅವರು ಹಾಗೇ ಹೇಳುತ್ತಿದ್ದರು. ದಾನ ಎನ್ನುವ ಅಧರ್ಮವನ್ನು ಹಾಗೆ ಮಾಡಿಸಿದ್ದಾರೆ. ಅಷ್ಟೋ ಇಷ್ಟೋ ದೇವರು, ಮೋಕ್ಷ ಎನ್ನುವವರು ಯಾರಾದರೂ ಇದ್ದರೆ ಅವರಿಗೆ ಮಂತ್ರೋಪದೇಶ ಮಾಡಿ ಧ್ಯಾನ ಮಾಡುವಂತೆ ಮಾಡುತ್ತಿದ್ದರು. ಈ ದಿನ ಕೂಡಾ ಧ್ಯಾನ ಮಂತ್ರೋಪದೇಶ ಒಳ್ಳೆಯ ಕೆಲಸಗಳೆಯೆಂದು ಎಲ್ಲರೂ ಅಂದುಕೊಳ್ಳುತ್ತಿದ್ದಾರೆ ಆದರೆ, ಧ್ಯಾನ ಕೂಡಾ ದೇವರ ಮಾರ್ಗದಲ್ಲಿ ಸರಿಯಾದ ಕೆಲಸವಲ್ಲ ಎಂದು ಎಲ್ಲರಿಗೂ ತಿಳಿದಿಲ್ಲ.

ದ್ವಾಪರಯುಗದ ಕೊನೆಗೆ ಬರುವಷ್ಟರಲ್ಲಿ ಬ್ರಾಹ್ಮಣರು ಬಿತ್ತಿದ ಬೀಜಗಳಾದ ಯಜ್ಞ, ದಾನ, ವೇದ, ತಪಸ್ಸುಗಳು (ಧ್ಯಾನಗಳು) ಭಾರತದೇಶವೆಲ್ಲ ವ್ಯಾಪಿಸಿಹೋಗಿ ಹೆಚ್ಚಾಗಿ ಆ ಕೆಲಸಗಳು ಮಾಡುತ್ತಿದ್ದರು. ಎಲ್ಲಿಯಾದರೂ ಭಕ್ತಿ ಇದೆ ಎಂದರೇ ಅಲ್ಲಿ ಯಜ್ಞಗಳು ಇರುತ್ತವೆ. ಯಜ್ಞಗಳು ಇದ್ದರೆ ವೇದ ಪಠನೆ ಇರುತ್ತದೆ. ಆ ಎರಡೂ ಇದ್ದರೆ ಅವು ಮಾಡಿದ್ದಕ್ಕೆ ಪ್ರಜೆಗಳು ಕೊಡುವ ದಾನಗಳು ಕೂಡಾ ಇರುತ್ತವೆ. ಈ ಮೂರು ಒಂದಕ್ಕೊಂದು ಅಂಟಿಕೊಂಡಿರುತ್ತವೆ. ಈ ಮೂರು ಮಾಡದವನು ಪ್ರತ್ಯೇಕವಾದ ಭಕ್ತಿಮಾರ್ಗವನ್ನು ಕೋರುವವನಿಗೆ ಪ್ರತ್ಯೇಕಿಸಿ ಮಂತ್ರವನ್ನು ಹೇಳಿ ಧ್ಯಾನ ಮಾಡಿರೆಂದು ಹೇಳುತ್ತಿದ್ದರು. ಯಜ್ಞಗಳಿಗಿಂತ ದೊಡ್ಡಕೆಲಸವೆಂದು ಒಳ್ಳೆಯಮಾರ್ಗವೆಂದು ನಂಬಿ ಮಂತ್ರ ಧ್ಯಾನವನ್ನು (ತಪಸ್ಸನ್ನು) ಮಾಡುವವನು ಜೀವನದಲ್ಲಿ ತಪ್ಪುದಾರಿ ಹಿಡಿದಿದ್ದೇನೆಂದು ಸ್ವಲ್ಪವಾದರೂ ತಿಳಿಯದೆ ಕಾಲವೆಲ್ಲವನ್ನು ಧ್ಯಾನದಲ್ಲಿ ವೃಥಾ ಮಾಡಿಕೊಳ್ಳುತ್ತಿದ್ದಾನೆ. ಭಗವದ್ಗೀತೆಯಲ್ಲಿ ಇವು ಕೆಲಸಕ್ಕೆ ಬರುವುದಿಲ್ಲ ಎಂದು ಯಾವ ಕೆಲಸಗಳನ್ನು ಹೇಳಿದ್ದಾರೊ ಆ ಕೆಲಸಗಳನ್ನೇ ಪ್ರಜೆಗಳಿಗೆ ಬೋಧಿಸಿ ಬ್ರಾಹ್ಮಣರು ಅದೇಕೆಲಸ ವಾಗಿ ತಪ್ಪುದಾರಿ ಹಿಡಿಸಿದ್ದಾರೆಂದು ಯಾರಿಗೂ ತಿಳಿದಿಲ್ಲ.

ಭೂಮಿಮೇಲೆ ನಡೆಯುವ ಅಕ್ರಮಗಳೆಲ್ಲವನ್ನು ದೇವರು, ದೇವದೂತರು ಗಮನಿಸುತ್ತಲೇ ಇರುತ್ತಾರೆ. ಭಕ್ತಿ ಎನ್ನುವ ಹೆಸರಿನಿಂದ ಪ್ರಜೆಗಳು ತಪ್ಪುದಾರಿ

ಹಿಡಿದುಹೋಗಿದ್ದಾರೆಂದು, ಬ್ರಾಹ್ಮಣರು ತಪ್ಪುದಾರಿ ಹಿಡಿಸುವುದರಿಂದ ಅವರನ್ನು ನಂಬಿದ ಪ್ರಜೆಗಳು ಸ್ವಲ್ಪವಾದರೂ ಹಿಂತಿರುಗಿ ನೋಡದಂತೆ ಅಜ್ಞಾನದೊಳಗೆ, ಅಧರ್ಮಗಳೊಳಗೆ ದೂಡುತ್ತಿದ್ದಾರೆಂದು ತಿಳಿದು ಮಾನವರನ್ನು ಉದ್ಧರಿಸಬೇಕಾದವನು, ಅಧರ್ಮಗಳನ್ನು ತಿಳಿಸುವವನು ದೇವರೇ ಆಗಿರುವುದರಿಂದ ಪ್ರಜೆಗಳಿಗೆ ಸತ್ಯವನ್ನು ತಿಳಿಸಿ ಧರ್ಮಗಳನ್ನು ತಿಳಿಸಬೇಕೆಂದು ದೇವರು ನಿರ್ಣಯಿಸಿಕೊಂಡು ತಾನು ಭಗವಂತನಾಗಿ ಭೂಮಿಮೇಲಕ್ಕೆ ಬಂದಿದ್ದಾನೆ. ದೇವರು ಭೂಮಿಮೇಲೆ ಮನುಷ್ಯನಂತೆ ಬರಬೇಕೆಂದರೆ ಭೂಮಿಮೇಲೆ ಅಜ್ಞಾನ ಪೂರ್ತಿ ವ್ಯಾಪಿಸಿದೆಯೆಂದು ಅರ್ಥವಾಗುತ್ತಿದೆ. ಎಷ್ಟೋ ತಪ್ಪುದಾರಿಯಲ್ಲಿ ಪ್ರಜೆಗಳು ಹೋಗುತ್ತಿದ್ದರೆ, ಅಧರ್ಮಗಳು ಪೂರ್ತಿಯಾಗಿ ವ್ಯಾಪಿಸಿಕೊಂಡು ಧರ್ಮಗಳು ಕ್ಷೀಣಸ್ಥಿತಿಗೆ ಬಂದಾಗ ದೇವರು ಅವತರಿಸಿ ಬಂದು ಪುನಃ ಧರ್ಮಗಳನ್ನು ಪುನರುದ್ಧರಿಸಿ ಅಧರ್ಮಗಳನ್ನು ಅಡಗಿಸುತ್ತಾನೆ. ಆದ್ದರಿಂದ ಅಧರ್ಮಗಳು ಹೇಗೆ ಬಂದರೂ ಅವುಗಳನ್ನು ಅಡಗಿಸಿ ಧರ್ಮಗಳನ್ನು ಮೇಲಕ್ಕೆ ತರುವುದೇ ಭಗವಂತನ ಆಶಯ ಆಗಿರುವುದರಿಂದ ಮೊದಲು ಸೂರ್ಯನು ಮನುವಿಗೆ ಹೇಳಿದ ಜ್ಞಾನವನ್ನೇ ಹೇಳುತ್ತಿದ್ದೇನೆಂದು ಅದನ್ನೇ ಭಗವದ್ಗೀತೆಯಾಗಿ ಹೇಳಿ ಹೋಗಿದ್ದಾನೆ.

ಕೃಷ್ಣನು ಹೇಳಿದ ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 48, 53 ಶ್ಲೋಕಗಳಲ್ಲಿ ಅಧರ್ಮಗಳನ್ನು ಕುರಿತು ಹೇಳಿದ್ದಾನೆ. ಅವುಗಳಿಂದ ದೇವರು ತಿಳಿಯುವುದಿಲ್ಲ ಎಂದು ಹೇಳಿದ್ದಾನೆ. ಆ ಎರಡು ಶ್ಲೋಕಗಳನ್ನು ಕೆಳಗೆ ನೋಡಿರಿ.

**ಶ್ಲೋ॥ 48. ನವೇದಯಜ್ಞಾಧ್ಯಯನೈರ್ನ ದಾನೈರ್ನ ಚಕ್ರಿಯಾಭಿರ್ನತಪೋಭಿರುಗ್ರೈಃ।**
**ಏವಂರೂಪ ಶ್ತಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ॥**

**ಭಾವಾರ್ಥ :– "ಭೂಮಿ ಮೇಲೆ ನೀನು ಹೊರತು ಈ ವಿಶ್ವರೂಪವನ್ನು ನೋಡಿದವರು ಯಾರೂ ಇಲ್ಲ. ವೇದಾಧ್ಯಯನದಿಂದಾಗಲೀ, ದಾನಗಳಿಂದಾಗಲೀ,**

**ಯಜ್ಞಗಳಿಂದಾಗಲೀ, ಉಗ್ರವಾದ ತಪಸ್ಸುಗಳಿಂದಾಗಲೀ ಈ ರೂಪವನ್ನು ತಿಳಿಯಲು ಶಕ್ಯವಲ್ಲ.**

**ಶ್ಲೋ॥ 53. ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾ ನಸಿ ಮಾಂ ಯಥಾ॥**

**ಭಾವಾರ್ಥ :– "ತಪ್ಪಸ್ಸುಗಳಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ, ವೇದಪಠನಗಳಿಂದಾಗಲಿ ಈಗ ನೀನು ನೋಡಿದ ವಿಶ್ವರೂಪವನ್ನು (ದೇವರನ್ನು) ತಿಳಿಯುವುದು ದುರ್ಲಭ, ಶಕ್ಯವಲ್ಲ."**

ಭಗವದ್ಗೀತೆಯಲ್ಲಿ ಕೃಷ್ಣನು ಈ ಎರಡು ಶ್ಲೋಕಗಳನ್ನು ಹೇಳಿ ಭೂಮಿಮೇಲೆ ಬ್ರಾಹ್ಮಣರು ಪ್ರಚಾರ ಮಾಡಿದ ನಾಲ್ಕು ಕಾರ್ಯಗಳು ದೇವರನ್ನು ತಿಳಿಯುವುದಕ್ಕೆ ಕೆಲಸಕ್ಕೆ ಬರುವುದಿಲ್ಲವೆಂದು ಹೇಳಿದ್ದಾನೆ. ಉಳಿದ ಭಗವದ್ಗೀತೆ ಯೆಲ್ಲವೂ ಧರ್ಮಗಳಾದ ಯೋಗಗಳನ್ನು ಕುರಿತು ಹೇಳಿದ್ದಾನೆ. ದ್ವಾಪರಯುಗದ ಕೊನೆಯಲ್ಲಿ ದೇವರು ಹೇಳಬೇಕಾದ ಜ್ಞಾನವೆಲ್ಲವನ್ನು ಹೇಳಿದ್ದಾನೆ. ಅದೇ ಜ್ಞಾನವೇ ಸೃಷ್ಠಿ ಆದಿಯಲ್ಲಿ ದೇವರು ಆಕಾಶವಾಣಿ ಮೂಲಕ ಹೇಳಿದಾಗ ಅದನ್ನೇ ಸೂರ್ಯನು ಕೇಳಿ ಭೂಮಿಮೇಲೆ ಮನುವಿಗೆ ತಿಳಸಿದ್ದಾನೆ. ಇದು ಭೂಮಿಮೇಲೆ ಎಲ್ಲಾ ಹರಡಿದರೂ, ಸ್ವಲ್ಪ ಕಾಲಕ್ಕೆ ಪ್ರಜೆಗಳಲ್ಲಿ ಇಲ್ಲದೇ ಹೋಗಿರುವುದು ನಡೆದಿದೆ. ಆದರೆ ಅಷ್ಟೋ ಇಷ್ಟೋ ಸೂರ್ಯನ ಹೇಳಿದ ಜ್ಞಾನವನ್ನು ತಿಳಿದ ಬ್ರಾಹ್ಮಣರು ಅದೇ ಕೆಲಸವಾಗಿ ಜ್ಞಾನಕ್ಕೆ ವಿರುದ್ಧ ದಿಕ್ಕಿನಲ್ಲಿ ಪ್ರಜೆಗಳನ್ನು ನಡೆಸಿದಾಗ, ಆ ನಡಿಗೆ ದ್ವಾಪರಯುಗದ ಕೊನೆಗೆ ದೊಡ್ಡದಾಗಿ, ದೇವರು ಅದನ್ನು ಅಡಗಿಸುವುದಕ್ಕೆ ಭೂಮಿಮೇಲೆ ಮನುಷ್ಯನಾಗಿ ಅವತರಿಸಿ, ಅಧರ್ಮಗಳನ್ನು ಧರ್ಮಗಳನ್ನು ಹೇಳಿಹೋಗುವುದು ನಡೆದಿದೆ. ಅದರಿಂದ ಬ್ರಾಹ್ಮಣರು ಮೂರು ಯುಗಗಳ ಪರ್ಯಂತ ಮಾಡಿದ ಮೋಸ ತಿಳಿದಿದೆ.

ಕಲಿಯುಗ ಪ್ರಾರಂಭದಲ್ಲಿ ದೇವರು ಇದು ಒಳ್ಳೆಯದು, ಇದು ಕೆಟ್ಟದು ಎಂದು ಹೇಳಿದರೂ ಭಗವದ್ಗೀತಾ ಜ್ಞಾನ ಹೊರಗೆ ಬಂದರೂ ಭಗವದ್ಗೀತೆ

ಏನೊ ಯಾರಿಗೂ ತಿಳಿಯದೆ ಹೋಗಿರುವುದರಿಂದ ಬ್ರಾಹ್ಮಣರು ತಮ್ಮ ಕಾರ್ಯಗಳನ್ನು ಯಥಾತಥವಾಗಿ ಸಾಗಿಸುತ್ತಾ ಬಂದಿದ್ದಾರೆ. ಈ ದಿನ ಕೂಡಾ ಸಾಗಿಸುತ್ತಲೇ ಇದ್ದಾರೆ. ಪೂರ್ವದಿಂದ ಉಳಿದ ಕುಲಗಳೆಲ್ಲ ನೀಚಕುಲಗಳೆಂದು, ತಮ್ಮ ಬ್ರಾಹ್ಮಣ ಕುಲವೊಂದೇ ಪವಿತ್ರವಾದುದೆಂದು ಹೇಳುತ್ತಾ ಬಂದವರು, ಇಲ್ಲಿಯವರೆಗು ಬೋಧಕರಾಗಿದ್ದು ಪ್ರಜೆಗಳಿಗೆ ಮಾರ್ಗದರ್ಶಕರಾಗಿ ಬದಲಾಗಿ ತಪ್ಪುದಾರಿ ತೋರಿಸಿ ಅಜ್ಞಾನದೊಳಗೆ ಸೇರುವಂತೆ ಮಾಡಿದ್ದಾರೆ. ಪೂರ್ವದಲ್ಲಿ ತಪ್ಪುದಾರಿ ಹಿಡಿಸಿ, ನಾವು ನಿಮಗೆ ಮಾರ್ಗದರ್ಶಕರೆಂದು ಹೇಳಿದ್ದಾರೆ. ಕುಲ ವಿವಕ್ಷ ದ್ವಾಪರಯುಗದವರೆಗು ಸ್ವಲ್ಪ ಮಟ್ಟಿಗೆ ಇತ್ತು. ಈ ದಿನ ಕಲಿಯುಗದಲ್ಲಿ ಶೇ. ತೊಂಬತ್ತ (90) ರಷ್ಟು ಅಂಟಬಾರದ ತನವನ್ನು ಪ್ರವೇಶ ಇಟ್ಟಿದ್ದಾರೆ. ತಾವು ಪವಿತ್ರರೆಂದು, ಉಳಿದ ಕುಲದವರು ಅಪವಿತ್ರರೆಂದು, ಆದ್ದರಿಂದ ಉಳಿದ ಕುಲದವರನ್ನು ಶೂದ್ರರಾಗಿ ಹೇಳುತ್ತಿದ್ದೇವೆಂದು ಹೇಳಿದ್ದಾರೆ. ಭಗವದ್ಗೀತೆಯಲ್ಲಿನ **ಚಾತುರ್ವರ್ಣ್ಯಂ** ಎನ್ನುವ ಶ್ಲೋಕಕ್ಕೆ, ಕುಲಗಳನ್ನು ಅಂಟಿಸಿ ಹೇಳುವುದೇ ಅಲ್ಲದೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆನ್ನುವ ಮೂರು ಕುಲಗಳು ಹೊರತು ಉಳಿದ ಎಷ್ಟು ಕುಲಗಳಿದ್ದರೂ ಎಲ್ಲಾ ಕುಲಗಳು ಶೂದ್ರರಾಗಿ (ಕ್ಷುದ್ರವಾದವರಾಗಿ) ಹೇಳುವುದು ನಡೆದಿದೆ. ಶೂದ್ರರು ಎಂದರೇ ನೀಚವಾದರೆಂದು ಹೇಳಿದ್ದಾರೆ. ಭಗವದ್ಗೀತೆಯಲ್ಲಿ ದೇವರೇ ಈ ವಿಷಯವನ್ನು ಹೇಳಿದ್ದಾನೆ ಎನ್ನುವಂತೆ ನಂಬಿಸಿ ತೋರಿಸಿದ್ದಾರೆ.

ಕಲಿಯುಗ ಮೊದಲಿನಿಂದ ಕುಲ ವಿವಕ್ಷ ಎನ್ನುವುದು ಬಹಳ ತೀವ್ರವಾಗಿ ಇತ್ತು. ಇಂದಿಗೂ ಇದ್ದರೂ ನಲವತ್ತು, ಐವತ್ತು (40–50) ವರ್ಷಗಳಲ್ಲಿದ್ದಷ್ಟು ಇಲ್ಲ. ಈಗ ಬ್ರಾಹ್ಮಣರಿಗೆ ಉಪಾಧಿ ಕಡಿಮೆಯಾಗಿದೆ. ಪೂರ್ವಕಾಲದಂತೆ ಅವರ ಮಾತುಗಳು ಕೇಳುವವರಿಲ್ಲ. ನಾಗರಿಕತೆ ಬೆಳೆದಂತೆಲ್ಲ ಬ್ರಾಹ್ಮಣರ ಪ್ರಾಬಲ್ಯ ಕಡಿಮೆಯಾಗಿದೆ. ಈದಿನ ಬ್ರಾಹ್ಮಣರಲ್ಲಿ ಕೆಲವರ ಸ್ಥಿತಿ ಬಹಳ ದಯನೀಯವಾಗಿ ತಯಾರಾಗಿದೆ. ಈಗಿನ ವಿಷಯ ನಂತರ ಹೇಳಿಕೊಳ್ಳೋಣ. ಕಲಿಯುಗ ಆರಂಭದಲ್ಲಿನ ಬ್ರಾಹ್ಮಣರ ವಿಷಯವನ್ನು ಗಮನಿಸೋಣ. ದ್ವಾಪರ ಯುಗದಲ್ಲಿ ರಾಜರನ್ನು ಮಾತ್ರವೇ ತಪ್ಪುದಾರಿ ಹಿಡಿಸಿ ಯಜ್ಞಗಳನ್ನು ಮಾಡಿಸಿದವರು,

ಕಲಿಯುಗದಲ್ಲಿ ಧನಿಕರಿಂದ, ಉಳಿದ ಪ್ರಜೆಗಳಿಂದ ಯಜ್ಞಗಳನ್ನು ಮಾಡಿಸುವುದಲ್ಲದೆ ಮಂತ್ರೋಪದೇಶ ಮಾಡಿ, ಅದನ್ನೇ ಗುರು ಉಪದೇಶವೆಂದು ಹೇಳಿ ಅವರನ್ನು ಶಿಷ್ಯರನ್ನಾಗಿ ಮಾಡಿಕೊಂಡು ಗುರುಗಳಾಗಿ ಚಲಾವಣೆ ಆಗುತ್ತಿದ್ದರು. ಕಲಿಯುಗದಲ್ಲಿ ಅಂಟಬಾರದತನ ಎನ್ನುವುದನ್ನು ಪ್ರವೇಶವಿಟ್ಟು ಪ್ರಜೆಗಳನ್ನು ದೂರವಾಗಿಟ್ಟು, ಪ್ರಜೆಗಳೆಲ್ಲರೂ ಅಪವಿತ್ರರೆನ್ನುವಂತೆ, ತಾವು ಪವಿತ್ರರೆನ್ನುವಂತೆ ಯಾರನ್ನು ತಾಕದಂತಿದ್ದರು. ಯಾರೂ ಅವರನ್ನು ತಾಕಬಾರದೆನ್ನುವ ನಿಯಮವನ್ನು ಇಟ್ಟು ಪ್ರಜೆಗಳ ಮೇಲೆ ಪೂರ್ತಿ ವಿವಕ್ಷ ತೋರಿಸುತ್ತಿದ್ದರು.

ಬ್ರಾಹ್ಮಣರಿಗೊಬ್ಬರಿಗೆ ಬ್ರಹ್ಮಜ್ಞಾನ ತಿಳಿದಿದೆಯೆಂದು, ಇತರರಿಗೆ ತಿಳಿದಿಲ್ಲವೆಂದು, ಇತರರು ತಮಗೆ ಶಿಷ್ಯರಾಗಿದ್ದು ಸೇವೆ ಮಾಡಿದರೆ ಅವರಿಗೆ ಉಪದೇಶವನ್ನು ಕೊಟ್ಟು ಜ್ಞಾನಕ್ಕೆ ಅರ್ಹರನ್ನಾಗಿ ಮಾಡುತ್ತೇವೆಂದು ಹೇಳುತ್ತಿದ್ದರು. ಅದರಿಂದ ಬಹಳಜನ ಅವರಿಗೆ ಶಿಷ್ಯರಾಗಿ ಬದಲಾಗಿಹೋಗುತ್ತಿದ್ದರು. ಸ್ವತಃವಾಗಿ ಯಾರಾದರೂ ಜ್ಞಾನವನ್ನು ತಿಳಿಯಲ್ಪಟ್ಟರೂ, ಯಾರಾದರೂ ಜ್ಞಾನವನ್ನು ಬೋಧಿಸಿದರೂ ಅದು ಅವರಿಗೆ ಸರಿಹೋಗುತ್ತಿರಲಿಲ್ಲ. ಅಂತಹ ಸಮಯದಲ್ಲಿ ಗೌತಮ ಬುದ್ಧನು ವೈರಾಗ್ಯವನ್ನು ಹೊಂದಿ, ಮನೆಯನ್ನು ಬಿಟ್ಟುಹೋಗಿ ಜ್ಞಾನಕ್ಕಾಗಿ ಚಿಂತಿಸಿ ಚಿಂತಿಸಿ ಕೊನೆಗೆ ಒಂದುದಿನ ಜ್ಞಾನೋದಯವಾಗಿ, ಆತನು ತನ್ನ ಬೋಧನೆಗಳನ್ನು ಅಶೋಕ ಚಕ್ರವರ್ತಿಗು ಕೂಡಾ ಕೇಳಿಸಿ ತಾನು ಜ್ಞಾನಿಯಾಗಿ ತಯಾರಾಗುವುದೇ ಅಲ್ಲದೆ ಇತರರನ್ನು ಎಷ್ಟೋಜನರನ್ನು ಜ್ಞಾನಿಗಳಾಗಿ ತಯಾರು ಮಾಡಿದ್ದಾನೆ. ಬುದ್ಧನು ಸನ್ಯಾಸಿಯಾಗಿ ಬದಲಾಗಿ ಉಳಿದವರನ್ನು ಕೂಡಾ ಅದೇ ಮಾರ್ಗದಲ್ಲಿ ಇರುವಂತೆ ಮಾಡುವುದು ನೋಡಿದ ಬ್ರಾಹ್ಮಣರು ಬುದ್ಧನು ಪ್ರತ್ಯೇಕವಾಗಿ ತಯಾರಾಗಿಹೋಗಿ, ಪ್ರತ್ಯೇಕ ಸಮಾಜವನ್ನು ತಯಾರು ಮಾಡಿದ್ದಾನೆಂದು ಆತನ ಮೇಲೆ ನಿಂದಾರೋಪಣೆ ಮಾಡಿದ್ದಾರೆ.

ಬ್ರಾಹ್ಮಣರು ಸಮಾಜದಲ್ಲಿ ನಾವು ಗುರುಗಳಾಗಿ ಇರುವುದು ಹೊರತು ಇತರರು ಯಾರೂ ಗುರುವಾಗಿ ಇರಬಾರದೆನ್ನುವ ಭಾವನೆ ಅವರಲ್ಲಿ ಇರುತ್ತಿತ್ತು. ಅಷ್ಟೊತ್ತಿಗೆ ಬುದ್ಧನ ಸೂತ್ರಗಳನ್ನು ಉಪಯೋಗಿಸಿ ಕೆಲವರು ಸನ್ಯಾಸಿಗಳಾಗಿ

ಬದಲಾಗಿಹೋಗುವುದು ಸ್ವಲ್ಪವೂ ಸರಿಹೋಗದ ಬ್ರಾಹ್ಮಣರು ಬುದ್ಧನನ್ನು ಎದುರಿಸುವುದು ತಮ್ಮ ಕೈಲಾಗುವುದಿಲ್ಲವೆಂದು, ಬುದ್ಧನ ಬೋಧನೆಗಳು ಕೇಳಿದ ಅವರು ತಮ್ಮ ಬೋಧನೆಗಳನ್ನು ಲೆಕ್ಕಮಾಡುತ್ತಿಲ್ಲವೆಂದು ತಿಳಿದು ಬುದ್ಧನನ್ನು, ಬುದ್ಧನ ಬೋಧನೆಗಳನ್ನು ಎದುರಿಸದೆ ಹೋದರೆ ತಮ್ಮ ಭೋಗ ಭಾಗ್ಯಗಳೆಲ್ಲ ಅಲ್ಲಿಗೆ ಇಲ್ಲದಂತೆ ಹೋಗುತ್ತವೆಂದು, ತಮ್ಮನ್ನು ಬೋಧಕರನ್ನಾಗಿ ಯಾರೂ ಒಪ್ಪಿಕೊಳ್ಳುವುದಿಲ್ಲವೆಂದು ತಿಳಿದವರಾಗಿ ಕೊನೆಗೆ ಅವರಲ್ಲಿ ಯಾರೂ ಅಲ್ಲದೆ ಒಬ್ಬ ಹೊಸ ಮನುಷ್ಯನನ್ನು, ಹೊಸ ಸಿದ್ಧಾಂತದಿಂದ ತೆಗೆದುಕೊಂಡುಬಂದು ತಾವು ಹಿಂದಿದ್ದು ಬುದ್ಧನ ಬೋಧನೆಗಳು ತಡೆಗಟ್ಟಬೇಕೆಂದು ತಿಳಿದು, ತಮಗೆ ಸಂಬಂಧವಿಲ್ಲದ ಹೊಸ ಮನುಷ್ಯನನ್ನು ಹೊಸ ಸಿದ್ಧಾಂತದಿಂದ ತೆರೆಮೇಲಕ್ಕೆ ತಂದಿದ್ದಾರೆ. ಕೇರಳ ರಾಷ್ಟ್ರದಲ್ಲಿ ಒಂದು ಕುಗ್ರಾಮದಿಂದ ಹತ್ತು ವರ್ಷಗಳು ಕೂಡಾ ತುಂಬದ ಒಬ್ಬ ಬ್ರಾಹ್ಮಣ ಬಾಲಕನನ್ನು ಆರಿಸಿಕೊಂಡು ಆ ಬಾಲಕನಿಗೆ ವೇದಗಳಲ್ಲಿ ಸ್ವಲ್ಪ ಶಿಕ್ಷಣ ಕೊಟ್ಟು, ಚಿಕ್ಕ ವಯಸ್ಸಿನಲ್ಲಿಯೇ ತೆರೆಮೇಲಕ್ಕೆ ತಂದಿದ್ದಾರೆ.

ಹಾಗೆ ತಂದಿರುವ ಬಾಲಕನನ್ನು ಶಂಕರಾಚಾರ್ಯರೆಂದು ನಾಮಕರಣ ಮಾಡಿದ್ದಾರೆ. ಶಂಕರಾಚಾರ್ಯರು ಚಿಕ್ಕವಯಸ್ಸಿನಲ್ಲಿಯೇ ಜ್ಞಾನ ಹೇಳುತ್ತಿದ್ದಾನೆಂದು, ಆತನು ಪರಮ ಶಿವನ ಅವತಾರವೆಂದು, ಸಾಕ್ಷ್ಯಾತ್ತು ಈಶ್ವರನ ಅವತಾರವಾಗುವುದರಿಂದ ಎಲ್ಲರೂ ಆತನನ್ನು ಆಶ್ರಯಿಸಬೇಕೆಂದು ಪ್ರಚಾರ ಮಾಡಿದ್ದಾರೆ. ಈ ವಿಧವಾಗಿ ಏನು ತಿಳಿಯದ ಅಮಾಯಕ ಬಾಲಕನನ್ನು ಹೊರಗೆ ಪ್ರಪಂಚದಲ್ಲಿ ಪೂರ್ತಿ ಪ್ರಚಾರ ಮಾಡಿದ್ದಾರೆ. ಆದಿ ಶಂಕರಾಚಾರ್ಯನಿಗೆ ಏನು ತಿಳಿಯದಿದ್ದರೂ ಆತನದು ಅದ್ವೈತ ಸಿದ್ಧಾಂತವೆಂದು ಹೇಳಿ ಬುದ್ಧನ ಜ್ಞಾನಕ್ಕೆ ಪೋಟಿಯಾಗಿ ಶಂಕರನನ್ನು ನಿಲ್ಲಿಸಿದ್ದಾರೆ. ಆ ಬಾಲಕನನ್ನೇ ಆದಿ ಶಂಕರಾಚಾರ್ಯನೆಂದು ಹೇಳುತ್ತಾ ಬಂದಿದ್ದಾರೆ. ಶಂಕರಾಚಾರ್ಯನನ್ನು ತಮ್ಮ ಕೈಕೆಳಗೆ ಇಟ್ಟುಕೊಂಡು ಹೊರಗೆ ಆತನು ಸಾಕ್ಷ್ಯಾತ್ತು ಈಶ್ವರನೆಂದು ಪ್ರಚಾರ ಮಾಡಿದ್ದಾರೆ. (**ಗಮನಿಕೆ :–** ಆದಿ ಶಂಕರಾಚಾರ್ಯರ ಹುಟ್ಟಿನಿಂದ ಸಾವಿನವರೆಗು ನಡೆದ ಸಂಘಟನೆಗಳೆಲ್ಲವೂ ನಾವು ಬರೆದ **“ಹಿಂದೂ ಮತದಲ್ಲಿ ಸಿದ್ಧಾಂತಕರ್ತರು”** ಎನ್ನುವ ಗ್ರಂಥದಲ್ಲಿ ಬರೆದಿದ್ದೇವೆ ನೋಡಬಹುದು.)

ಆದಿ ಶಂಕರಾಚಾರ್ಯರು ಎಂದು ಬ್ರಾಹ್ಮಣರು ಪ್ರಚಾರ ಮಾಡಿದ ಬಾಲಕನಿಗೆ ಅವರು ಚಿಕ್ಕಂದಿನಲ್ಲಿಯೇ ಕಲಿಸಿದ ವೇದಗಳು ಸ್ವಲ್ಪ ತಿಳಿದಿವೆ ಆದರೆ, ಅದ್ವೈತ ಸಿದ್ಧಾಂತ ಎಂದರೆ ಏನೋ? ಆತನಿಗೆ ಯಾವುದು ಗೊತ್ತಿಲ್ಲ. ಶಂಕರನಿಗೆ ಅದ್ವೈತ ಎಂದರೆ ಏನೊ ತಿಳಿಯದ ದಿನಗಳಲ್ಲಿಯೇ ಶಂಕರನ ಸಿದ್ಧಾಂತ ಅದ್ವೈತ ಸಿದ್ಧಾಂತವೆಂದು ಬ್ರಾಹ್ಮಣರು ಪ್ರಚಾರ ಮಾಡಿದ್ದಾರೆ. ಆ ದಿನಗಳಲ್ಲಿ ಬುದ್ಧನನ್ನು ಏಕೆ ಅಷ್ಟಾಗಿ ಬ್ರಾಹ್ಮಣರು ವಿರೋಧಿಸಿದ್ದಾರೆ ಎಂದರೇ ಅದಕ್ಕೆ ಒಂದೇ ಒಂದು ಕಾರಣ ಇದೆಯೆಂದು ಹೇಳಬಹುದು. ಅದೇನೆಂದರೇ! ಗೌತಮ ಬುದ್ಧನು ಬ್ರಾಹ್ಮಣನು ಅಲ್ಲ. ಬ್ರಾಹ್ಮಣನು ಅಲ್ಲದವನು ಯಾರಾದರೂ ಗುರುವಾಗಿ ಬದಲಾಗುವುದಕ್ಕಾಗಲಿ, ಬೋಧಕನಾಗಿ ಬದಲಾಗುವು ದಕ್ಕಾಗಲಿ ಬ್ರಾಹ್ಮಣರಿಗೆ ಸ್ವಲ್ಪವೂ ಸರಿಹೋಗುವುದಿಲ್ಲ. ಅದರಿಂದ ಭವಿಷ್ಯತ್ತಿನಲ್ಲಿ ಪ್ರಸ್ತುತ ತಮಗಿರುವ ಘನತೆ, ಗೌರವ ಹೋಗುತ್ತದೆನ್ನುವ ಭಯ. ಬೋಧಕರಾಗಿ, ಗುರುಗಳಾಗಿ ತಮಗೇ ಬ್ರಹ್ಮವಿದ್ಯೆ, ಬ್ರಹ್ಮಜ್ಞಾನ ತಿಳಿದಿದೆಯೆಂದು ಹೇಳಿಕೊಂಡು ಪ್ರಜೆಗಳನ್ನು ಮೋಸಮಾಡುತ್ತಾ ತಪ್ಪುದಾರಿ ಹಿಡಿಸಿದ ವಿಷಯ ತಿಳಿಯುತ್ತದೆನ್ನುವ ಭಯದಿಂದ ಇತರೆ ಕುಲದವರನ್ನು ಯಾರನ್ನು ತಮ್ಮ ಸ್ಥಾನದವರೆಗು ಬರದಂತೆ ಮಾಡಬೇಕೆಂದುಕೊಂಡಿದ್ದಾರೆ. ಬುದ್ಧನು ಜ್ಞಾನ ಹೇಳಿ, ಗುರುವಾಗಿ ಕೆಲವರನ್ನು ಬದಲಾಯಿಸಿದ್ದಾನೆ. ಆದ್ದರಿಂದ ಬದಲಾದವರನ್ನು ನೋಡಿ ಇನ್ನೂ ಕೆಲವರು ಬದಲಾಗಿ ಹೋಗಿದ್ದಾರೆ. ಹಾಗೆ ಕೆಲವರು ಇತರರನ್ನು ಆಶ್ರಯಿಸಿ ಜ್ಞಾನಿಗಳಾಗಿ ತಯಾರಾಗುವುದು ಬ್ರಾಹ್ಮಣರಿಗೆ ಸ್ವಲ್ಪವೂ ಇಷ್ಟವಿಲ್ಲ. ನಮಗಿಂತ ಉಳಿದವರೆಲ್ಲರೂ ಕಡಿಮೆ ಕುಲದವರೇಯೆಂದು, ತಮಗಿಂತ ಕಡಿಮೆ ಕುಲದವರು ಯಾರೂ ತಮ್ಮ ಮುಂದೆ ಮೇಲಕ್ಕೆ ಬಾರಬಾರದೆಂದು ಇರುವುದರಿಂದ ತಮಗೆ ದೈವಜ್ಞಾನ ತಿಳಿಯದಿದ್ದರೂ ಜ್ಞಾನಿಗಳಾಗಿ ಚಲಾವಣೆ ಆಗುವ ಬ್ರಾಹ್ಮಣರಿಗೆ ಬುದ್ಧನ ವಿಷಯ ಸ್ವಲ್ಪವೂ ಸರಿಹೋಗಲಿಲ್ಲ. ಕುಲವಿವಕ್ಷ ಬ್ರಾಹ್ಮಣರಲ್ಲಿ ಕಲಿಯುಗದಲ್ಲಿ ಪೂರ್ತಿಯಾಗಿ ಇರುವುದರಿಂದ ಬ್ರಾಹ್ಮಣರು ಅಂದಿಗೂ ಇಂದಿಗೂ ಇತರರನ್ನು ಅಸೂಯೆಯಿಂದ ನೋಡುತ್ತಿದ್ದಾರೆ.

ಬುದ್ಧನ ಕಾಲದಲ್ಲಿ ಬುದ್ಧನ ಮೇಲೆ ಪೋಟಿಗೆ ಛಲದಿಂದ ತಾವು ಅಲ್ಲದೆ ತಮಗಿಂತ ಹೊಸಬನು, ಹೊಸ ಸಿದ್ಧಾಂತದಿಂದ ಬಂದಂತೆ ಮಾಡಿ, ತಾವೇ ಶಂಕರನನ್ನು ತಯಾರು ಮಾಡಿ ಶಂಕರಾಚಾರ್ಯರ ಅದ್ವೈತ ಸಿದ್ಧಾಂತವನ್ನು ಕೂಡಾ ಅವರೇ ತಯಾರಿ ಮಾಡಿ ಅದಕ್ಕೆ ಅದ್ವೈತ ಸಿದ್ಧಾಂತವೆಂದು ಹೆಸರು ಇಟ್ಟಿದ್ದಾರೆ. ಹೀಗೆ ಆದಿನ ಅದ್ವೈತ ಸಿದ್ಧಾಂತಕರ್ತನನ್ನು, ಅದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾರೆ. ಅದೆಲ್ಲವೂ ಬುದ್ಧನನ್ನು ಎದುರಿಸುವುದಕ್ಕೆ. ಆದರೆ ಬುದ್ಧನಿಗೆ ಆ ವಿಷಯ ಯಾವುದು ತಿಳಿದಿಲ್ಲ. ಹಾಗೇ ಈಕಡೆ ಇರುವ ಆದಿ ಶಂಕರಾಚಾರ್ಯರಿಗೆ ಕೂಡಾ ಈ ವಿಷಯ ಗೊತ್ತಿಲ್ಲ. ಬುದ್ಧನು ಮರಣಿಸಿದ ನಂತರ ಕೂಡಾ ಬೌದ್ಧಪ್ರಚಾರ ನಿಲ್ಲಲಿಲ್ಲ. ಸ್ವತಃವಾಗಿ ಅಶೋಕ ಚಕ್ರವರ್ತಿ, ಆಶೋಕ ಚಕ್ರವರ್ತಿ ಮಗಳು ಬುದ್ಧನ ಸೂತ್ರಗಳನ್ನು ಚೆನ್ನಾಗಿ ಪ್ರಚಾರ ಮಾಡಿದ್ದಾರೆ. ಅವರ ವಿಷಯ ಹಾಗಿರುವಾಗ, ಬುದ್ಧನ ಧರ್ಮಪ್ರಚಾರಗಳನ್ನು ತಡೆಗಟ್ಟಿ ಹಿಂದೂಮತವನ್ನು ಕಾಪಾಡುತ್ತೇವೆಂದು ಬ್ರಾಹ್ಮಣರು ವಿಸ್ತೃತವಾಗಿ ಪ್ರಚಾರ ಮಾಡಲಾರಂಭಿಸಿದ್ದಾರೆ.

ಆಗ ಕೆಲವರು ವಿವೇಕವಂತರು ಬುದ್ಧನು ಕೂಡಾ ಹಿಂದೂ ಮತದಲ್ಲಿನವನೇ ಅಲ್ಲವೆ! ಬುದ್ಧನ ಧರ್ಮಸೂತ್ರಗಳು ಕೂಡಾ ಹಿಂದೂ ಧರ್ಮದಲ್ಲಿ ಭಾಗಗಳೇ ಅಲ್ಲವೆ! ಎಂದು ಬ್ರಾಹ್ಮಣರನ್ನು ಪ್ರಶ್ನಿಸಿದಾಗ! ಅಲ್ಲ ಬುದ್ಧನು ಹೇಳಿರುವುದು ಹಿಂದೂಮತಕ್ಕೆ ಸಂಬಂಧವಿಲ್ಲ. ಆತನದ್ದು ಪ್ರತ್ಯೇಕ ಮತ ಎಂದು ಆದಿನ ಬ್ರಾಹ್ಮಣರೇ ಹಿಂದೂಮತದಲ್ಲಿನ ಬುದ್ಧನನ್ನು ಪರ ಮತವನ್ನು ಪ್ರಚಾರ ಮಾಡುವ ಬೇರೆಯವನೆಂದು, ಹಿಂದೂವು ಅಲ್ಲವೆಂದು, ಆತನ ಜ್ಞಾನ ಹಿಂದೂ ಜ್ಞಾನಕ್ಕೆ ಸಂಬಂಧ ಇಲ್ಲವೆಂದು, ಮೊಟ್ಟಮೊದಲು ಹಿಂದೂ ಮತದಲ್ಲಿ ಸೀಳಿಕೆಗಳು ತಂದಿರುವುದು ಬ್ರಾಹ್ಮಣರೇ. ಆ ದಿನ ಬುದ್ಧನು ಪ್ರಜೆಗಳಿಗೆ ತನ್ನ ಜ್ಞಾನವನ್ನು ಹೇಳಿದ್ದಾನೆ ಹೊರತು ತನ್ನದು ಹಿಂದೂಮತ ಅಲ್ಲವೆಂದು ಎಲ್ಲಿಯೂ ಹೇಳಲಿಲ್ಲ. ಅನವಶ್ಯಕವಾಗಿ ಆದಿನ ಬ್ರಾಹ್ಮಣರೇ ಹಿಂದೂಮತವನ್ನು ಸೀಳಿಕೆಗಳು ಮಾಡಿ, ಹಿಂದೂಮತ ಕ್ಷೀಣತೆಗೆ ಮೊದಲನೆ

ಕಾರಕರಾಗಿದ್ದಾರೆ. ಚರಿತ್ರೆ ತಿಳಿಯದ ಹಿಂದೂ ಸಂಸ್ಥೆಗಳಿಗೆ ಈ ವಿಷಯ ತಿಳಿಯುವುದಿಲ್ಲ. ಭೌದ್ಧಮತ ಎನ್ನುವ ಸೀಳಿಕೆ ಹಿಂದೂ ಮತದಲ್ಲಿನದೇಯೆಂದು, ಅದನ್ನು ಹಿಂದೂಮತದಿಂದ ಬಲವಂತವಾಗಿ ಸೀಳಿಸಿ ಹೊರಗೆ ಕಳಿಸಿ ಬೌದ್ಧಮತ ಎಂದು ಹೆಸರು ಇಟ್ಟಿರುವುದು ಬ್ರಾಹ್ಮಣರೇ ಎನ್ನುವ ವಿಷಯ ಇಂದು ಹಿಂದೂ ಮತ ರಕ್ಷಕರೆಂದು ಹೆಸರಿಟ್ಟುಕೊಂಡವರಿಗು ಸಹಿತ ಗೊತ್ತಿಲ್ಲ.

ಈ ದಿನ ಹಿಂದೂ ಮತ ರಕ್ಷಣೆ ಸಂಸ್ಥೆಗಳಲ್ಲಿ ಮುಖ್ಯಸ್ಥಾನಗಳಲ್ಲಿ ಇರುವ ಬ್ರಾಹ್ಮಣರು ಬುದ್ಧನ ವಿಷಯ ಹೊರಗೆ ಬರದಂತೆ ಇತರೆ ಹಿಂದೂಗಳ ದೃಷ್ಠಿ ಆ ವಿಷಯಗಳ ಮೇಲೆ ಹೋಗದಂತೆ ಮಾಡುತ್ತಾ ತಾವೇ ನಿಜವಾದ ದೇಶ ಭಕ್ತರು ಎಂದು, ತಾವೇ ನಿಜವಾದ ಹಿಂದೂಗಳು ಎಂದು ಪ್ರಚಾರ ಮಾಡುತ್ತಿದ್ದಾರೆ. ಇಂದಿಗೂ ಬೌದ್ಧಮತ ಇದೆ. ಬೌದ್ಧ ಮತದಲ್ಲಿ ಕಾಷಾಯ ಬಟ್ಟೆಗಳೇ ಉಡುತ್ತಿದ್ದಾರೆ. ಕಾಷಾಯ (ಕಾವಿ) ಬಟ್ಟೆಗಳು ಧರಿಸುವವರು ಪೂರ್ವದಿಂದ ಹಿಂದೂಗಳು ಹೊರತು ಯಾರೂ ಧರಿಸಲಿಲ್ಲ. ಯಾವ ಮತದವರಿಗೂ ಕಾಷಾಯ ಬಟ್ಟೆ ಇಲ್ಲ. ಹಾಗಿರುವಾಗ ಕಾಷಾಯ ಧರಿಸಿದವರು ಇತರೆ ಮತದವರು ಹೇಗಾಗುತ್ತಾರೆಂದು ಯಾರೂ ಆಲೋಚಿಸದೆ ಹೋಗಿದ್ದಾರೆ. ಈ ದಿನ ಹಿಂದೂ ರಕ್ಷಣೆ ಸಂಸ್ಥೆಯವರು ಏಕೆ ಆಲೋಚಿಸುತ್ತಿಲ್ಲ? ಹಿಂದೂತ್ವದಲ್ಲಿ ಸನ್ಯಾಸತ್ವವನ್ನು ಸ್ವೀಕರಿಸುವುದು, ತಲೆ ಬೋಳಿಸಿಕೊಂಡು ಕಾಷಾಯ ಬಟ್ಟೆಗಳು ಧರಿಸುವುದು ಇರುವ ಕೆಲಸವೇ ಅಲ್ಲವೆ! ಅದೇ ಕೆಲಸವನ್ನೇ ಬುದ್ಧನನ್ನು ಅನುಸರಿಸಿದವರು ಮಾಡಿದರೆ ಅವರು ಹಿಂದೂಗಳು ಅಲ್ಲದೆ ಇತರೆ ಮತದವರು ಹೇಗಾಗಿದ್ದಾರೆ? ಮೊದಲನೆಯವನಾದ ಬುದ್ಧನು (ಗೌತಮನು) ಹಿಂದೂ ಮತದಲ್ಲಿನ ಬೋಧನೆಗಳು ಕೇಳಿ, ಹಿಂದೂ ಮತದಲ್ಲಿನ ಗ್ರಂಥಗಳು ಓದಿ ಒಂದೇಸಲ ಸನ್ಯಾಸತ್ವವನ್ನು ತೆಗೆದುಕೊಳ್ಳಬೇಕೆಂದು ಮನೆ ಬಿಟ್ಟು ಹೆಂಡತಿ ಮಕ್ಕಳನ್ನು ಬಿಟ್ಟುಹೋಗಿದ್ದಾನೆ. ನಂತರ ಸನ್ಯಾಸತ್ವವನ್ನು ಸ್ವೀಕರಿಸಿ ಬಿಕ್ಷಾಟನೆ ಮಾಡಿದ್ದಾನೆ. ಸನ್ಯಾಸತ್ವ, ಬಿಕ್ಷಾಟನೆ ಒಂದು ಹಿಂದೂಮತದಲ್ಲಿಯೇ ಹೊರತು ಯಾವ ಇತರೆ ಮತಗಳಲ್ಲಿ ಇಲ್ಲ. ಹಾಗಿರುವಾಗ ಏಕೆ ಇತರೆ ಮತವಾಗಿ

ಕಾಣಿಸಿದೆಯೇ ಎಂದು ಆಲೋಚಿಸಿದರೆ ಅದಕ್ಕೆಲ್ಲ ಒಂದೇವೊಂದು ಕಾರಣ ಇದೆ. ಅದೇ ಕುಲ ವಿವಕ್ಷ. ಗೌತಮನು ಬುದ್ಧನಾಗಿ ಬದಲಾಗದ ಮುನ್ನ ಹಿಂದೂ ಸಮಾಜದವನೆ. ಗೌತಮನು ಬುದ್ಧ ಎನ್ನುವ ಹೆಸರಿನಿಂದ ಸಂಚರಿಸುವುದು ಹಿಂದೂ ಮತದಲ್ಲಿನ ವಿಧಾನ. ಹಿಂದೂವು ಯಾರಾದರೂ ಪೂರ್ತಿ ಜ್ಞಾನಿಯಾಗಿ ಬದಲಾದ ನಂತರ ನಾದಪುತ್ರನು (ಜ್ಞಾನ ಶಬ್ದ ಪುತ್ರನು) ಆಗುತ್ತಿದ್ದಾನೆ. ಆದ್ದರಿಂದ ತಂದೆ ವೀರ್ಯಬಿಂಧುವಿಗೆ ಹುಟ್ಟಿದಾಗ ಇಟ್ಟಿರುವ ಹೆಸರಿನಿಂದ ಚಲಾವಣೆ ಆಗಬಾರದು ಎನ್ನುವುದು ಹಿಂದೂ ಮತದಲ್ಲಿ ಆಧ್ಯಾತ್ಮಿಕ ಧರ್ಮ. ಹಿಂದೂ ಮತ ಧರ್ಮದ ಪ್ರಕಾರ ಗೌತಮನು ಎನ್ನುವ ಹೆಸರಿರುವ ವ್ಯಕ್ತಿ ಬುದ್ಧನು (ಜ್ಞಾನಿ) ಎನ್ನುವ ಅರ್ಥದಿಂದ ಸಂಚರಿಸುವುದು ಹಿಂದೂ ಧರ್ಮವೇ ಆಗುತ್ತದೆ ಆದರೆ ಇತರೆ ಮತ ಧರ್ಮ ಅಲ್ಲವಲ್ಲ! ನಾವು ಹಿಂದೂ ಮತ ರಕ್ಷಕರು ಎನ್ನುವವರಿಗೆ ಇವೆಲ್ಲವೂ ಕಾಣಿಸಲಿಲ್ಲವಾ? ಯಾವ ಕೋನದಲ್ಲಿ ನೋಡಿದರೂ ಗೌತಮನು (ಬುದ್ಧನು) ಹಿಂದೂವೇ ಆಗುತ್ತಾನೆ ಹೊರತು, ಇತರೆ ಮತದವನು ಅಲ್ಲವಲ್ಲ! ಹಾಗಿರುವಾಗ ಗೌತಮನನ್ನು ಪರಮತದವನೆಂದು, ನಮ್ಮ ಕೈಯನ್ನು ನಾವೇ ಕತ್ತರಿಸಿಕೊಂಡಂತೆ ಇದೆ. ಎಲ್ಲವುಗಳಲ್ಲಿಯೂ ಹಿಂದೂಮತ ಆಚಾರಗಳಿಂದ ಸಮಾನ ಆಚಾರಗಳಿರುವ ಬೌದ್ಧಮತವನ್ನು ಇಂದಿಗಾದರೂ ಕಣ್ತೆರೆದು ನಮ್ಮ ತಪ್ಪುಗಳನ್ನು ನಾವು ತಿಳಿದುಕೊಂಡು ಹಿಂದೂಮತದಲ್ಲಿ ಬೆರೆಸಿಕೊಂಡು, ಹಿಂದೂಮತ ಶ್ರೇಷ್ಠವಾದುದೆನ್ನುವ ಭಾವನೆ ಎಲ್ಲರಲ್ಲಿ ಉಂಟಾಗುವಂತೆ ಮಾಡಿದರೆ ಹಿಂದೂ ಮತದಲ್ಲಿ ಬಲ ಕೈಗೂಡಬಲ್ಲದು.

ಹಿಂದೂ ಮತದಲ್ಲಿನ ಬ್ರಾಹ್ಮಣರಲ್ಲಿರುವ ಕುಲ ವಿವಕ್ಷದಿಂದ ಹಿಂದೂಮತವನ್ನೇ ಬ್ರಾಹ್ಮಣರು ಸೀಳಿಸಿಹಾಕಿದ್ದಾರೆ. ಇವತ್ತು ಎಷ್ಟೋ ಕೋಟಿಗಳ ಜನಸಂಖ್ಯೆಯನ್ನು ಹೊಂದಿ, ಕೆಲವು ದೇಶಗಳಲ್ಲಿ ಪೂರ್ತಿಯಾಗಿ ವ್ಯಾಪಿಸಿಕೊಂಡ ಬೌದ್ಧಮತವನ್ನು ಸೀಳಿಸಿ ಪರಮತವೆಂದು ಹೇಳಿದ ಬ್ರಾಹ್ಮಣರು ಹಿಂದೂಮತಕ್ಕೆ ಎಷ್ಟೋ ದ್ರೋಹ ಮಾಡಿದ್ದಾರೆ. ತಮಗಿರುವ ಕುಲವಿವಕ್ಷದಿಂದ ಆ ದಿನ ಈ ದಿನ ಹಿಂದೂಮತದಲ್ಲಿ ಯಾರೂ ಮೇಲಕ್ಕೆ ಬರಬಾರದೆಂದು ತಿಳಿದು, ಹಾಗೆ

ಯಾರಾದರೂ ಮೇಲಕ್ಕೆ ಬಂದರೆ ತಮ್ಮ ಗೌರವ ಮರ್ಯಾದೆಗಳಿಗೆ ಭಂಗ ಏರ್ಪಡುತ್ತದೆಂದು ಮೊದಲೇ ಅವರನ್ನು ದೂರವಾಗಿಟ್ಟು ತಮ್ಮ ಪ್ರಾಧಾನ್ಯತೆಯನ್ನು ಸಾರಿಕೊಳ್ಳುತ್ತಿದ್ದಾರೆ. ಅಷ್ಟು ಕುಲ ವಿವಕ್ಷ ನಮಗೆ ಎಲ್ಲಿಯೂ ಕಾಣಿಸಲಿಲ್ಲವೇ! ಎಂದು ಕೆಲವರು ಕೇಳಬಹುದು. ನಾನು ಕೇಳಿದ ಪ್ರಶ್ನೆಗಳೆಲ್ಲ ಕುಲ ವಿವಕ್ಷಗೆ ಸಂಬಂಧಿಸಿರುವವೇ ಅಲ್ಲವೆ! ಬ್ರಾಹ್ಮಣರು ಈ ದಿನ ಮತ್ತು ಆ ದಿನ ವಿವಕ್ಷವನ್ನು ತೋರಿಸುತ್ತಲೇ ಇದ್ದಾರೆ. 'ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿಯುತ್ತಾ ನನ್ನನ್ನು ಯಾರೂ ನೋಡಲಿಲ್ಲ' ಎನ್ನುವಂತೆ ನಾವು ಸಕ್ರಮವಾದವರೇ ಎಂದರೇ ಅಲ್ಲವೆನ್ನುವುದಕ್ಕೆ ಎಷ್ಟೋ ಆಧಾರಗಳು ಇವೆ. ಪೂರ್ವದಲ್ಲಿಯೇ ಆದಿ ಶಂಕರಾಚಾರ್ಯರ ಸಮಕ್ಷಮದಲ್ಲಿಯೇ ನಡೆದ ಒಂದು ಸಂಘಟನೆಯನ್ನು ವಿವರಿಸಿಕೊಂಡು ನೋಡಿದರೆ ಏನರ್ಥವಾಗುತ್ತದೊ ನೀವೆ ನೋಡಿಕೊಳ್ಳಿರಿ. ನಾವು ಒಬ್ಬರಮೇಲೆ ನಿಂದನೆ ಹಾಕುವಾಗ ಎಷ್ಟೋ ಕೋನಗಳಲ್ಲಿ ನೋಡಿದ ನಂತರವೇ ಹೇಳುತ್ತೇವೆ.

ಒಂದು ದಿನ ಭಾರತದೇಶದಲ್ಲಿಯೇ ಒಂದು ಪಟ್ಟಣದಲ್ಲಿ ಒಂದು ದಾರಿಯಲ್ಲಿ ನಾಲ್ವರು ಬ್ರಾಹ್ಮಣರೊಂದಿಗೆ ಕೂಡಿ ಶಂಕರಾಚಾರ್ಯರವರು ಹೋಗುತ್ತಿದ್ದರು. ಶಂಕರಾಚಾರ್ಯರವರ ಪಕ್ಕದಲ್ಲಿ ಆತನಿಗೆ ಶಿಷ್ಯರಾಗಿ ಇರುವವರೇ ನಾಲ್ಕುಜನ ಹೋಗುತ್ತಿದ್ದರು. ಆಗ ಅದೇ ದಾರಿಯಲ್ಲಿ ಒಬ್ಬ ಶೂದ್ರನಾದ ಹರಿಜನನು ಬೇಟೆಗೆ ಹೋಗುತ್ತಾ ಎದುರಾಗಿದ್ದಾನೆ. ಆಗ ಶಂಕರಾಚಾರ್ಯರ ಶಿಷ್ಯರು ಎದುರು ಬರುವ ಹರಿಜನನೊಂದಿಗೆ "ಅಲ್ಲಿಯೇ ನಿಲ್ಲು! ದೂರವಾಗಿ ಇರು. ನಾವು ಹೋದ ನಂತರ ಹೋಗೆಂದು" ಹೇಳಿದರು. ಆಗ ಆ ಹರಿಜನನು ಎದುರು ಪ್ರಶ್ನೆ ಹಾಕಿದ್ದಾನೆ. "ನಾನು ಏಕೆ ನಿಲ್ಲಬೇಕು?" ಎಂದು ಕೇಳಿದ್ದಾನೆ. ಅದಕ್ಕೆ "ನಾವು ಬ್ರಾಹ್ಮಣರು, ನೀನು ನೀಚಕುಲದವನು. ನಿನ್ನಿಂದ ನಮಗೆ ಅಂಟು ಏರ್ಪಡುತ್ತದೆ. ನಂತರ ನಾವು ಶುದ್ಧಿ ಮಾಡಿಕೊಳ್ಳಬೇಕಾಗಿರುತ್ತದೆ. ಆದ್ದರಿಂದ ನೀನು ಅಲ್ಲಿಯೇ ಪಕ್ಕದಲ್ಲಿ ನಿಂತುಕೊಯೆಂದು" ಹೇಳಿದ್ದಾರೆ. ಆಗ ಅಲ್ಲಿರುವ ಮಾದಿಗನು ಅನೇಕ ಪ್ರಶ್ನೆಗಳಿಂದ ಅವರನ್ನು ಕೇಳುವುದರಲ್ಲಿ ಅವರ ಹತ್ತಿರ ಉತ್ತರ ಇಲ್ಲದಂತೆ ಹೋಗಿದೆ. ಆತ್ಮಗೆ ಅಂಟು

ಇಲ್ಲ ಎಂದು ಆತ್ಮಜ್ಞಾನ ಇದೆ. "ಶರೀರ ನೀಚವಾದುದಾದರೆ, ನಿನ್ನದು ಎಷ್ಟು ನೀಚವೊ ನನ್ನದು ಅಷ್ಟೇ ನೀಚವಾಗುತ್ತದೆ. ನೀನು ಶರೀರವನ್ನು ನೋಡಿ ಅಂಟು ಎನ್ನುತ್ತಿದ್ದೀಯಾ? ಅಥವಾ ಆತ್ಮನನ್ನು ಅಂಟು ಎನ್ನುತ್ತಿದ್ದೀಯಾ?" ಎಂದು ಪ್ರಶ್ನೆಗಳನ್ನು ಕೇಳಿದನು. ಕೊನೆಗೆ ಶಂಕರಾಚಾರ್ಯರವರು ಆತನಿಗೆ ಉತ್ತರ ಹೇಳಲಾರದೆ ನಮಸ್ಕಾರ ಮಾಡಿ "ನೀನು ಇಷ್ಟು ದೊಡ್ಡ ಜ್ಞಾನಿಯೆಂದು ಅಂದುಕೊಳ್ಳಲಿಲ್ಲ. ನಮ್ಮವರು ನಿನ್ನನ್ನು ಅನವಶ್ಯಕವಾಗಿ ಪ್ರಶ್ನಿಸಿದ್ದಾರೆ. ಅವರು ಹಾಗೆ ಪ್ರಶ್ನಿಸುವುದು ತಪ್ಪೇಯೆಂದು" ಶಂಕರನು ಅಲ್ಲಿರುವ ಹರಿಜನನೊಂದಿಗೆ ಹೇಳಿದ್ದಾನೆ. ಆಗ ಅವರು ಯಾರ ದಾರಿಯಲ್ಲಿ ಅವರು ಹೋಗಿದ್ದಾರೆ.

ಆಗ ಶಂಕರಾಚಾರ್ಯರವರು ಮಾದಿಗನಿಗೆ ನಮಸ್ಕಾರ ಮಾಡಿದ್ದಾನೆ ಎಂದರೇ ಮರ್ಯಾದೆ ಹೋಗುತ್ತದೆಂದು ಆಲೋಚಿಸಿದ ಬ್ರಾಹ್ಮಣರು, ಆಗ ದಾರಿಯಲ್ಲಿ ಎದುರಾದವನು ಸಾಕ್ಷಾತ್ತು ಈಶ್ವರನೇಯೆಂದು, ಆದ್ದರಿಂದ ಶಂಕರಾಚಾರ್ಯರವರು ಆತನಿಗೆ ನಮಸ್ಕರಿಸಿದ್ದಾನೆಂದು ಎಣೆದು ಹಬ್ಬಿಸಿದ್ದಾರೆ. ಅಲ್ಲಿ ಕುಲ ವಿವಕ್ಷ ತಿಳಿಯದೇ ಹರಿಜನನ ಸ್ಥಾನದಲ್ಲಿ ಈಶ್ವರನೇ ಬಂದಿದ್ದಾನೆಂದು ಹೇಳಿ ಸರಿಪಡಿಸಿದ್ದಾರೆ. ಈ ವಿಧವಾಗಿ ಎಲ್ಲಿಯಾದರೂ ಕುಲ ವಿವಕ್ಷ ಕಾಣಿಸದಂತೆ ಮಾಡುವುದಕ್ಕೆ ಅನೇಕ ವಿಧಗಳಲ್ಲಿ ಎಣೆದು ಹೇಳುತ್ತಿದ್ದಾರೆಂದು ತಿಳಿಯುತ್ತಿದೆ. ಆದರೂ ತಿಳುವಳಿಕೆಯುಳ್ಳವರು ಇದನ್ನು ಗ್ರಹಿಸಬಲ್ಲರು.

ಆ ದಿನವಾದರೂ, ಈ ದಿನವಾದರೂ ಎಂದಾದರೂ ಹಿಂದೂಮತದಲ್ಲಿ ಕುಲವಿವಕ್ಷ ಸಾಗುತ್ತಿದೆ. ದೊಡ್ಡ ಕುಲವಾಗಿ ಪ್ರಚಾರವಾದವರು ಚಿಕ್ಕ ಕುಲದವರನ್ನು ಪೂರ್ತಿ ವಿವಕ್ಷಗೆ ಒಳಪಡಿಸುತ್ತಿದ್ದಾರೆ. ಅದರಿಂದ ಮುಖ್ಯವಾಗಿ ಹಿಂದೂ ಮತವೇ ಕ್ಷೀಣಿಸುವುದಕ್ಕೆ ಅವಕಾಶ ಏರ್ಪಡುತ್ತಿದೆ. ಆ ದಿನ ಶಂಕರಾಚಾರ್ಯರವರು ಹರಿಜನನದ್ದೇ ಸತ್ಯವೆಂದು, ಆತನದ್ದೇ ನಿಜವಾದ ಜ್ಞಾನವೆಂದು ತಿಳಿದು ನಮಸ್ಕರಿಸಿದ್ದಾನೆ. ಅದು ಆ ದಿನ ಬ್ರಾಹ್ಮಣರಿಗೆ ಸ್ವಲ್ಪವೂ ಸರಿಹೋಗಲಿಲ್ಲ. ಆದರೂ ಆ ವಿಷಯದಿಂದ ಬ್ರಾಹ್ಮಣರಾದವರಿಗೇ ನಷ್ಟವೆಂದು ತಿಳಿದು ಹರಿಜನನನ್ನು ಈಶ್ವರನೇ ಮಾರುವೇಷದಲ್ಲಿ ಬಂದಿದ್ದಾನೆಂದು ಅಸತ್ಯ ಹೇಳಿ

ಸರಿಮಾಡಿದ್ದಾರೆ. ಆದಿ ಶಂಕರರನ್ನು ಗೊಂಬೆಯನ್ನಾಗಿ ಮಾಡಿ, ಅದ್ವೈತ ಸಿದ್ಧಾಂತಕರ್ತಯೆಂದು ಸಾರಿ ಹೇಳಿದವರು ಬ್ರಾಹ್ಮಣರೇ. ಆ ವಿಷಯಗಳು ಶಂಕರರಿಗೆ ವಯಸ್ಸು ಬಂದಂತೆಲ್ಲ ಸ್ವಲ್ಪಮಟ್ಟಿಗೆ ಅರ್ಥವಾಗಿದೆ. ಅದ್ವೈತವೆಂದರೆ ಏನೋ ತಿಳಿಯದ ನನ್ನನ್ನು ಅದ್ವೈತ ಸಿದ್ಧಾಂತಕರ್ತನಾಗಿ ಹೇಳುವುದರಲ್ಲಿ ಏನೋ ಕುತಂತ್ರ ಒಳಗೊಂಡಿದೆಯೆಂದುಕೊಂಡು ಗಮನಿಸುತ್ತಾ ಹೋದಾಗ, ಆತನ ಹಿಂದಿರುವವರ ಉದ್ದೇಶ ಎಲ್ಲವೂ ಶಂಕರಾಚಾರ್ಯರಿಗೆ ಅರ್ಥವಾಗಿದೆ. ಶಂಕರಾಚಾರ್ಯರವರು ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದರೂ ಆತನು ಎಷ್ಟೋ ಉತ್ತಮನು, ಧೀಶಾಲಿ. ಆದ್ದರಿಂದ ವಯಸ್ಸು 30 ವರ್ಷಗಳು ನಡೆಯುವಷ್ಟರಲ್ಲಿ ಶಂಕರರಿಗೆ ಅರ್ಥವಾಗಿರುವುದನ್ನನುಸರಿಸಿ ನೋಡಿದರೆ, ಆತನಿಗೆ ಆತನ ಸುತ್ತಲೂ ಇರುವ ಬ್ರಾಹ್ಮಣರ ಚರ್ಯಗಳು ದೋಷಪೂರಿತವಾದವುಗಳಾಗಿ, ಹಿಂದೂಮತಕ್ಕೆ ಹಾನಿ ಮಾಡುವವಾಗಿ ಕಾಣಿಸಿವೆ. ಆಗಾಗಲೇ ಅವರ ಕೈಗಳಲ್ಲಿ ಸಿಲುಕಿರುವ ಆತನು ಕೆಲವು ವಿಷಯಗಳಲ್ಲಿ ಅವರನ್ನು ಎದುರಿಸುವುದು ನಡೆದಿದೆ. ಅವರಿಗೆ ಇಷ್ಟವಿಲ್ಲದ ಭಗವದ್ಗೀತೆಗೆ ವಿವರವನ್ನು ಬರೆಯುವುದು ನಡೆದಿದೆ.

ಯಾವಾಗಾದರೆ 27ನೇ ವರ್ಷದ ನಂತರ ಶಂಕರನು ಭಗವದ್ಗೀತೆಗೆ ವಿವರವನ್ನು ಬರೆದಿದ್ದಾನೊ ಆಗಲೇ ಆತನು ತಮ್ಮ ಅಧೀನದಲ್ಲಿ ಇಲ್ಲದಂತೆ ಹೋಗುತ್ತಿದ್ದಾನೆಂದು, ಆತನನ್ನು ಪ್ರಚಾರ ಮಾಡಿದವರಿಗೆ ಅರ್ಥವಾಗಿದೆ. ಆಗಿನಿಂದ ಶಂಕರನ ಭಾವನೆಗಳು ಗ್ರಹಿಸಿದ ಬ್ರಾಹ್ಮಣರು ಆತನು 20 ಗ್ರಂಥಗಳು ಬರೆದಂತೆ ಪ್ರಚಾರ ಮಾಡಿ ಅವುಗಳನ್ನು ತಾವೇ ಸೃಷ್ಠಿಸಿ ಇಟ್ಟಿದ್ದಾರೆ. ಆಗ ಶಂಕರನು ಬರೆದ ಭಗವದ್ಗೀತೆ ಮೇಲೆ ದೃಷ್ಠಿ ಕಡಿಮೆಯಾಗಿ ಉಳಿದ ಗ್ರಂಥಗಳ ಮೇಲೆ ಅವರ ಧ್ಯಾಸ ಹೋಗುತ್ತದೆಂದು ಹಾಗೆ ಮಾಡಿದ್ದಾರೆ. ಇದೆಲ್ಲವೂ ಆದಿ ಶಂಕರಾಚಾರ್ಯರಿಗೆ ಇಷ್ಟವಾಗುತ್ತಿರಲಿಲ್ಲ. ಎಂದಿಗಾದರೂ ಶಂಕರನು ಇರುವ ವಿಷಯವೆಲ್ಲವೂ ಹೊರಗಿನವರಿಗೆ ಹೇಳಿದರೆ ತಾವು ದೋಷಿಗಳಾಗಿ ಉಳಿದುಹೋಗುತ್ತೇವೆಂದು ತಿಳಿದ ಅಂದಿನ ಹಿರಿಯರೆಲ್ಲರೂ ಸೇರಿ ಸಮಾವೇಶ ದಲ್ಲಿ ಚರ್ಚಿಸಿಕೊಂಡು, ಅದೇ ಕೆಲಸವಾಗಿ ಶಂಕರನನ್ನು ನಿರ್ಮಾನುಷ್ಯವಾದ

ಕೇದಾರ್‌ನಾಥ್‌ಗೆ ಕರೆದುಕೊಂಡುಹೋಗಿ, ಒಳ್ಳೆಯ ಆರೋಗ್ಯವಾಗಿರುವ ಶಂಕರನನ್ನು 32 ವರ್ಷಗಳ ವಯಸ್ಸಿನಲ್ಲಿ ಕೇದಾರ್‌ನಾಥ್ ಗುಡಿಯಲ್ಲಿ ಹತ್ಯೆ ಮಾಡಿ, ಹೊರಗಿನ ಪ್ರಪಂಚಕ್ಕೆ ಆತನು ಮರಣಿಸಿದ್ದಾನೆಂದು ಹೇಳಿದ್ದಾರೆ. ಯಾವ ರೋಗವಿಲ್ಲ, ಒಳ್ಳೆಯ ಯುಕ್ತವಯಸ್ಸಿನಲ್ಲಿರುವ ಬ್ರಹ್ಮಚಾರಿ ಇದ್ದಕ್ಕಿದ್ದಂತೆ ಹೇಗೆ ಮರಣಿಸಿದ್ದಾನೆಂದು ಯಾರೂ ಇಂದಿಗೂ ಪ್ರಶ್ನಿಸಿಕೊಳ್ಳದಿರುವುದು ಹಿಂದೂಗಳ ಲೋಪವೇಯೆಂದು ಹೇಳಬಹುದು.

ಹಿಂದೂ ಮತದಲ್ಲಿ ಒಬ್ಬ ಸಿದ್ಧಾಂತಕರ್ತ ಏಕೆ ಮರಣಿಸಿದ್ದಾನೆ? ಹೇಗೆ ಮರಣಿಸಿದ್ದಾನೆ? ಮರಣಿಸುವುದಕ್ಕೆ ತಕ್ಕ ವಾತಾವರಣವಾಗಲಿ, ರೋಗ ವಾಗಲಿ ಇಲ್ಲವೇ. ಎಷ್ಟೋ ಪ್ರಶ್ನೆಗಳಿದ್ದರೂ ಒಂದು ಪ್ರಶ್ನೆಯನ್ನು ಕೂಡಾ ಯಾರೂ ಹಾಕದಂತೆ ಆದಿನವೇ ಜಾಣ್ಮೆಯಿಂದ ಆತನು ಮರಣಿಸಿದ ಮೂರು ದಿನಗಳಿಗೆ ಹೊರಗಿನ ಪ್ರಪಂಚಕ್ಕೆ ತಿಳಿಸಿದ್ದಾರೆ. ಆತನನ್ನು ಕೇದಾರ್‌ನಾಥ್‌ನಲ್ಲಿಯೇ ಸಮಾಧಿ ಮಾಡಿ, ಯಾವ ಗುರುತುಗಳು ಸಿಗದಂತೆ ಮಾಡಿ ಆಗ ಹೊರಗಿನ ಪ್ರಪಂಚಕ್ಕೆ ಹೇಳಿದ್ದಾರೆ. ಇದಕ್ಕೆಲ್ಲ ಕಾರಣ ಆತನು ಕುಲ ವಿವಕ್ಷಗೆ ಸಹಕರಿಸದೆ ಹೋಗುವುದೆ. ಅವರು ಹೇಗೆ ತಯಾರು ಮಾಡಬೇಕೆಂದುಕೊಂಡಿದ್ದಾರೊ ಹಾಗೆ ತಯಾರು ಆಗದಿರುವುದೇ. ಬೇಡವೆಂದು ಹೇಳಿದರೂ ಕೇಳದಂತೆ ಅವರಿಗೆ ತಿಳಿಯದಂತೆ ಭಗವದ್ಗೀತೆ ಭಾಷ್ಯ ಬರೆಯುವುದೇ ತಪ್ಪಾಗಿದೆ. ಯಾವುದು ಏನಾಗಿದೆಯೋ ಆದರೆ ನಂತರ ಕಾಲದಲ್ಲಿ ಕೂಡಾ ಅದೇ ಉದ್ದೇಶವೇ ಬ್ರಾಹ್ಮಣ ರಲ್ಲಿ ಮುಂದುವರೆದಿದೆ.

ನಂತರ ಈ ಮಧ್ಯ ನಾಲ್ಕು ನೂರು ವರ್ಷಗಳ ಕಾಲದಲ್ಲಿ ದೇಶದಲ್ಲಿ ಎಲ್ಲಿ ನೋಡಿದರೂ ಬ್ರಾಹ್ಮಣರು ಅತ್ಯಧಿಕ ಧನವಂತರಾಗಿರುತ್ತಿದ್ದರು. ಅವರು ಊರಿನಲ್ಲಿ ಒಂದು ಕಡೆ ಭಾಗದಲ್ಲಿ ಪ್ರತ್ಯೇಕವಾಗಿ ಗುಂಪಾಗಿ ನಿವಾಸಿಸುತ್ತಿದ್ದರು. ಅವರು ನಿವಾಸಿಸುವ ಬೀದಿಗಳನ್ನು ಬ್ರಾಹ್ಮಣ ಬೀದಿಗಳು ಎನ್ನುತ್ತಿದ್ದರು. ಇಲ್ಲದಿದ್ದರೆ ಅಗ್ರಹಾರಗಳು ಎಂದು ಕರೆಯುತ್ತಿದ್ದರು. ಅಗ್ರ ಎಂದರೇ ಮೊದಲನೆಯದು ಅಥವಾ ದೊಡ್ಡದು ಎಂದು ಅರ್ಥ. ಎಂದರೇ ಅವರಿರುವ ಸ್ಥಳವನ್ನೇ ಊರಿಗೆಲ್ಲ

ಬಹಳ ಬೆಲೆಯುಳ್ಳದ್ದೆಂದು ಅರ್ಥ. ವೀರಬ್ರಹ್ಮಯ್ಯನವರು ಒಂದು ದಿನ ಪ್ರಯಾಣ ಮಾಡುತ್ತಿರುವಾಗ ಅವರ ಅಗ್ರಹಾರಗಳಲ್ಲಿ ಆತನನ್ನು ಹೋಗಲು ಬಿಡಲಿಲ್ಲ. ಆದಿನ ಆತನನ್ನು ಕೂಡಾ ಕುಲ ವಿವಕ್ಷದಿಂದಲೇ ನಿಲ್ಲಿಸಿದ್ದಾರೆ. ಎಲ್ಲಿಯಾದರೂ ಯಾವ ಕುಲಸ್ಥನಾದರೂ ಜ್ಞಾನ ಬೋಧನೆ ಮಾಡುತ್ತಾನೆ ಎಂದರೇ ಅವನಮೇಲೆ ಯಾವುದೊ ಒಂದು ವಿಧವಾಗಿ ಅಸೂಯೆಯನ್ನು ತೋರಿಸುತ್ತಿದ್ದರು. ಬೋಧಕರಾಗಿ ಆದರೂ, ಗುರುಗಳಾಗಿ ಆದರೂ ತಾವು ಹೊರತು ಭೂಮಿಮೇಲೆ ಯಾರೂ ಇರಬಾರದೆನ್ನುವುದೇ ಅವರ ಮುಖ್ಯ ಉದ್ದೇಶ. ಅದೇ ಉದ್ದೇಶದ ಪ್ರಕಾರ ಪೂರ್ವದಿಂದ ಈದಿನದವರೆಗು ಪ್ರವರ್ತಿಸುತ್ತಿದ್ದಾರೆ.

ಭಗವದ್ಗೀತೆಯನ್ನು ಹೇಳಿದವನು ಶ್ರೀಕೃಷ್ಣನು. ಆತನು ಬ್ರಾಹ್ಮಣನು ಅಲ್ಲ. ಆ ಒಂದು ಕಾರಣದಿಂದ ಪ್ರಜೆಗಳನ್ನು ಭಗವದ್ಗೀತೆಯನ್ನು ಓದಬಾರದೆಂದು ಹೇಳುತ್ತಿದ್ದಾರೆ. ಎಲ್ಲಿಯಾದರೂ ಭಗವದ್ಗೀತೆ ಮುಖ್ಯವೆಂದು ಯಾರಾದರೂ ಅಂದರೇ ಅವನಿಗೆ ಒಳ್ಳೆಯದನ್ನು ಹೇಳಿದಂತೆ ಹೇಳುತ್ತಾ ಅವನನ್ನು ತಪ್ಪುದಾರಿ ಹಿಡಿಸುತ್ತಿದ್ದಾರೆ. ಭಗವದ್ಗೀತೆಯಲ್ಲಿನ ಶ್ಲೋಕಗಳನ್ನು ಓದದಿದ್ದರೂ ಫರವಾಗಿಲ್ಲ ಭಗವದ್ಗೀತೆ ಕೊನೆಯಲ್ಲಿನ ಗೀತಾ ಮಹಿಮೆಯನ್ನು ಓದಿದರೆ ಗೀತೆಯನ್ನು ಒಟ್ಟಾರೆ ಓದಿದ ಪುಣ್ಯವೇ ಅಲ್ಲದೇ ಅನೇಕವಾದ ಲಾಭಗಳು ಉಂಟಾಗುತ್ತವೆಂದು ಬೋಧಿಸಿದ್ದಾರೆ ಹಾಗಿ ಹೇಳಿ ಅವರನ್ನು ಭಗವದ್ಗೀತೆ ಓದದಂತೆ ಮಾಡುತ್ತಿದ್ದಾರೆ. ದೇವರು ಜ್ಞಾನವನ್ನು ತಿಳಿಯಿರೆಂದು ತಿಳಿಸಿದಾಗ ಅವರು ಗೀತಾ ಮಹಿಮೆಯನ್ನು ಸೇರಿಸಿದ್ದಾರೆ.

**ಪ್ರಶ್ನೆ :– ನೀವು ಹೇಳುವುದರಲ್ಲಿ ಸತ್ಯ ಇಲ್ಲವೆನ್ನುವಂತೆ ತಿಳಿಯುತ್ತಿದೆ. ಏಕೆಂದರೆ! ಈ ದಿನ ಬಹಳಜನ ಬ್ರಾಹ್ಮಣರಾಗಿರುವ ಸ್ವಾಮೀಜಿಗಳು, ಭಗವದ್ಗೀತೆ ಯಜ್ಞವೆನ್ನುವ ಹೆಸರಿನಿಂದ ಕೆಲವು ದಿನಗಳು ಗೀತೆಯನ್ನು ವಿವರಿಸಿ ಹೇಳುತ್ತಿದ್ದಾರೆ. ಅವರು ಭಗವದ್ಗೀತೆಯನ್ನು ದ್ವೇಷಿಸುವವರಾದರೆ ಭಗವದ್ಗೀತೆಯನ್ನೇ ಹೇಳುವುದಿಲ್ಲ ಅಲ್ಲವೆ! ಅಷ್ಟೇ ಅಲ್ಲದೆ ಯಾರಿಗೂ ಬಾರದ ವಿಧವಾಗಿ ಅವರಿಗೆ ಭಗವದ್ಗೀತಾ ಶ್ಲೋಕಗಳೆಲ್ಲ ಕಂಠಸ್ತವಾಗಿವೆ. ನಾನು ನೋಡಿರುವುದರಲ್ಲಿ ಒಬ್ಬ ಸನ್ಯಾಸಿ ಸ್ವಾಮಿ, ಗತದಲ್ಲಿ**

**ಮಳಯಾಳ ಬ್ರಾಹ್ಮಣನೇ ಆದ ಸ್ವಾಮೀಜಿ ಎಷ್ಟೋ ವಿವರವಾಗಿ ಶ್ಲೋಕಗಳು ಹೇಳಿ ಬೋಧಿಸಿದ್ದಾನೆ. ಆತನ ಬೋಧನೆಗಳು ಕೇಳಿದವರು ಆತನ ಉಪನ್ಯಾಸಗಳಿಗೆ ಮೆಚ್ಚಿಕೊಂಡು ಕೂಡಲೇ ಆತನ ಆಶ್ರಮಕ್ಕೆ 30 ಎಕರೆಗಳ ಭೂಮಿ ಕೊಟ್ಟಿದ್ದಾರೆ. ಆತನು ವರ್ಷದಲ್ಲಿ ಒಂದು ತಿಂಗಳು ಕೂಡಾ ಖಾಲಿ ಇಲ್ಲದಂತೆ, ಪ್ರತಿ ತಿಂಗಳು ಎಲ್ಲಿಯೋ ಒಂದುಕಡೆ ಭಗವದ್ಗೀತೆ ಪ್ರವಚನಗಳು ಹೇಳುತ್ತಿದ್ದಾರೆ. ಇಲ್ಲಿಗೆ ಒಂದು ವರ್ಷದ ಕೆಳಗೆ ನಮ್ಮ ಊರಿನಲ್ಲಿ ಹೇಳಿದಲ್ಲಿಯೂ 204ನೇ ಗೀತಾಯಜ್ಞಎಂದು ಬೋರ್ಡುಕಟ್ಟಿರುವುದನ್ನು ನೋಡಿದ್ದೇನೆ. ಅದನ್ನನುಸರಿಸಿ ಆಗಾಗಲೇ 204 ಸಲ ಗೀತೆಯನ್ನು ಕುರಿತು ಉಪನ್ಯಾಸಗಳು ಹೇಳಿದ್ದಾನೆಂದು ತಿಳಿಯುತ್ತಿದೆ. ಇಲ್ಲಿಗೆ ಇನ್ನೂ ಎರಡು ಮೂರು ಕಡೆಯಾದರೂ ಗೀತಾ ಬೋಧನೆಗಳು ಮಾಡಿರುತ್ತಾನೆ. ಎಲ್ಲಿ ಹೇಳಿದರೂ ವಾರದ ದಿನಗಳು ಹೇಳುತ್ತಿದ್ದಾನೆ. ಆತನು ಎಷ್ಟೋ ದೊಡ್ಡದಾಗಿ ಇಂದಿಗೂ ಎರಡು ನೂರಕ್ಕೆ ಹೆಚ್ಚು ಊರಿನಲ್ಲಿ ಗೀತೆಯನ್ನು ವಾರದ ದಿನಗಳಿಗೆ ಕಡಿಮೆಯಾಗದಂತೆ ಹೇಳುತ್ತಿದ್ದಾನೆ. ಅಷ್ಟೇಅಲ್ಲದೆ ಆತನು ಭಗವದ್ಗೀತೆಯಲ್ಲಿ ಪ್ರತಿ ಶ್ಲೋಕವನ್ನು ವಿವರಿಸಿ ಎಲ್ಲರಿಗಿಂತ ದೊಡ್ಡದಾಗಿ ಎರಡುಸಾವಿರ ಪುಟಗಳ ಗ್ರಂಥವನ್ನು, ನಾಲ್ಕು ಭಾಗಗಳಾಗಿ ಬರೆದಿದ್ದಾನೆ. ಅಷ್ಟು ದೊಡ್ಡದಾಗಿ, ಅಷ್ಟು ವಿವರವಾಗಿ, ಅಷ್ಟು ಪುಟಗಳು ಬರೆದವರು ಇಲ್ಲಿಯವರೆಗು ಯಾರೂ ಇಲ್ಲ. ಅಷ್ಟಾಗಿ ಬ್ರಾಹ್ಮಣಕುಲದಲ್ಲಿ ಹುಟ್ಟಿದ ಆ ಸ್ವಾಮಿಜೀ ಗೀತೆಯನ್ನು ಕುರಿತು ಹೇಳುವುದಲ್ಲದೆ ಉಳಿದವರು ಕೂಡಾ ಪೂರ್ವದಲ್ಲಿ ಬ್ರಾಹ್ಮಣರಾಗಿದ್ದು ಈಗ ಸನ್ಯಾಸಿಗಳಾಗಿ ಇರುವವರು ಭಗವದ್ಗೀತೆ ಪ್ರಚಾರ ಮಾಡುತ್ತಿದ್ದಾರೆ. ಇಲ್ಲಿಯವರೆಗು ಭಗವದ್ಗೀತೆಯನ್ನು ಗ್ರಂಥವಾಗಿ ಬರೆದವರೆಲ್ಲರೂ ಈ ದಿನ ಸ್ವಾಮೀಜಿಗಳಾಗಿ ಇದ್ದರೂ ಗತದಲ್ಲಿ ಅವರು ಬ್ರಾಹ್ಮಣರೇ ಅಲ್ಲವೆ! ಇದಕ್ಕೆ ನೀವು ಏನನ್ನುತ್ತೀರಾ?**

**ಉತ್ತರ :–** ನೀವು ಹೇಳುವುದೆಲ್ಲಾ ಸತ್ಯವೇ! ಆದರೇ ನಿಮಗೆ ತಿಳಿಯದಂತೆ ಅದರಲ್ಲಿ ಅಸತ್ಯ ಕೂಡಾ ಅಡಕವಾಗಿದೆ. ನನಗೆ ಬ್ರಾಹ್ಮಣರೆಂದರೇ ದ್ವೇಷವಲ್ಲ, ವಿವಕ್ಷ ಅಲ್ಲ. ಸಾಮಾಜಿಕವಾಗಿ ನಡೆಯುವ ಒಳ್ಳೆಯ, ಕೆಟ್ಟದ್ದನ್ನು ಹೇಳುತ್ತಿದ್ದೇನೆ. ಶಂಕರಾಚಾರ್ಯರವರು ಕೂಡಾ ಕೇರಳ ಬ್ರಾಹ್ಮಣನೇ ಅಲ್ಲವೆ! ಆತನ ಪಕ್ಷದಲ್ಲಿ

ಏಕೆ ಮಾತನಾಡಿದ್ದೇನೆ? ಆತನಿಗೆ ಬ್ರಾಹ್ಮಣರೇ ಅನ್ಯಾಯ ಮಾಡಿದ್ದಾರೆ. ಅನ್ಯಾಯವಾದರೆ ಫರವಾಗಿಲ್ಲ, ನೇರವಾಗಿ ಹತ್ಯೆ ಮಾಡಿದ್ದಾರೆ. ಒಬ್ಬ ಸಿದ್ಧಾಂತಕರ್ತನೆಂದು ಹೆಸರಿಟ್ಟ ವ್ಯಕ್ತಿಯನ್ನೇ ಸಾಯಿಸಿದ್ದಾರೆ. ಎರಡನೆಯವರು ರಾಮಾನುಜರು. ರಾಮಾನುಜರು ಕೂಡಾ ತಮಿಳನಾಡು ಬ್ರಾಹ್ಮಣನು. ಆತನು ಸ್ವತಃವಾಗಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಕಟಿಸಿದ್ದಾನೆ. ಚಿಕ್ಕ ವಯಸ್ಸಿನಲ್ಲಿಯೇ ಬ್ರಾಹ್ಮಣರಿಗೆ ವಿರುದ್ಧವಾಗಿದ್ದೂ, ಬ್ರಹ್ಮವಿದ್ಯೆಯನ್ನು ಎಲ್ಲರಿಗೂ ಸಮಾನವಾಗಿ ಬೋಧಿಸಬೇಕೆಂದು ಹೇಳಿದವನು. ಆತನು ಕೂಡಾ ಬ್ರಾಹ್ಮಣನೇ ಆದರೂ ಬ್ರಾಹ್ಮಣರು ತಮ್ಮ ಸ್ವಾರ್ಥದಿಂದ ಸಾಯಿಸಬೇಕೆಂದುಕೊಂಡು ಒಳಸಂಚು ಹಾಕಲಿಲ್ಲವಾ? ಆತನನ್ನು ಕೂಡಾ ಸಾಯಿಸಿದಂತೆ ಹೇಳಬೇಕಾಗಿದ್ದೆ. ಕೊನೆಯ ಕ್ಷಣದಲ್ಲಿ ರಾಮಾನುಜರು ತಪ್ಪಿಸಿಕೊಂಡು ಹೋಗಿದ್ದಾನೆ. ಇಲ್ಲದಿದ್ದರೆ ಒಂದು ಕ್ಷಣ ಆ ದಿನ ತಡವಾಗಿದ್ದರೆ 20 ವರ್ಷಗಳ ವಯಸ್ಸಿನಲ್ಲಿಯೇ ರಾಮಾನುಜರು ಕಾಡು ಪ್ರಾಣಿಗಳ ದಾಳಿಯಲ್ಲಿ ಮರಣಿಸಿದಂತೆ ಪ್ರಚಾರವಾಗಿರುತ್ತಿದ್ದನು. ಶಂಕರಾಚಾರ್ಯರವರನ್ನು ಕೇದಾರ್‌ನಾಥ್‌ಗೆ ತೆಗೆದುಕೊಂಡು ಹೋದಂತೆ, ರಾಮಾನುಜರನ್ನು ಕಾಡಿನೊಳಗೆ ಒಳಸಂಚಿನಪ್ರಕಾರ ತೆಗೆದುಕೊಂಡು ಹೋಗಲಿಲ್ಲವಾ? ಆತನ ಅದೃಷ್ಠ ಚೆನ್ನಾಗಿದ್ದು ಚಿಕ್ಕ ಅನುಮಾನದಿಂದ ಒಂದು ಕ್ಷಣ ಮುಂಚೆಯೇ ಕಾಡಿನಲ್ಲಿ ಅಡ್ಡವಾಗಿ ಓಡಿಹೋಗಿದ್ದಾನೆ. ಇದಕ್ಕೆಲ್ಲ ಕಾರಣ ಕುಲ ವಿವಕ್ಷವೇಯೆಂದು ಹೇಳಬಹುದು.

ಇತರೆ ಕುಲದವರು ಜ್ಞಾನಿಗಳಾದರೂ, ಬೋಧಕರಾದರೂ, ಗುರುಗಳಾದರೂ ತಮ್ಮ ಸಾಮ್ರಾಜ್ಯ ಎಲ್ಲಾ ಹೋಗುತ್ತದೆಂದು ಬಹಳ ದುಃಖ ಪಡುವುದರಿಂದ ಇತರೆ ಕುಲದವರನ್ನು ಮೇಲಕ್ಕೆ ಬಾರದಂತೆ ಮಾಡಿದ್ದಾರೆ. ಅಷ್ಟೇಅಲ್ಲದೆ ಉಳಿದ ಕುಲದವರೆಲ್ಲರನ್ನು ಸೇರಿಸಿ ನೀಚರು ಎನ್ನುವ ಅರ್ಥ ಬರುವಂತೆ ಶೂದ್ರರು ಕರೆದಿದ್ದಾರೆ. ಎಲ್ಲರೂ ಸಮಾನವೇ ಎಂದು ಹೇಳಿದ ಶಂಕರಾಚಾರ್ಯರವರನ್ನು ಪೂರ್ತಿಯಾಗಿ ಸಾಯಿಸಿದ್ದಾರೆ. ರಾಮಾನುಜಾ ಚಾರ್ಯರನ್ನು ಸಾಯಿಸುವುದಕ್ಕೆ ಪ್ರಯತ್ನ ಮಾಡಿದ್ದಾರೆ. ಅಷ್ಟೇತಕ್ಕೆ ನೀವು

ಇಲ್ಲಿಯವರೆಗು ಹೇಳಿದ್ದೀರ ಅಲ್ಲವೆ! ಒಬ್ಬ ಸ್ವಾಮಿಜೀ ಬ್ರಾಹ್ಮಣನೇ ಆಗಿದ್ದು ಭಗವದ್ಗೀತೆಯನ್ನು ದೊಡ್ಡದಾಗಿ ಹೇಳಿದ್ದಾನೆ, ಹೇಳುತ್ತಿದ್ದಾನೆ ಎಂದಿದ್ದೀಯಾ. ನೀನು ಹೇಳುವುದು ಲೋಕ ತಿಳಿದ ಸತ್ಯ. ಲೋಕವು ತಿಳಿಯದ ಸತ್ಯ ಏನಿದೆಯೋ ನೋಡಿದರೆ, ತಿಳಿದರೆ ನೀನು ಹಾಗೆ ಹೇಳುವವನೇ ಅಲ್ಲ. ಲೋಕವು ತಿಳಿಯದ ಸತ್ಯ ಏನೆಂದರೇ! ಕೃಷ್ಣನು ಎಂದರೇನೆ ಅವರಿಗೆ ಸರಿಹೋಗುವುದಿಲ್ಲ. ಅದಕ್ಕೆ ಒಂದೇವೊಂದು ಕಾರಣವಿದೆ. ಅದು ಏನೆಂದರೇ! ಆತನು ಬ್ರಾಹ್ಮಣನು ಅಲ್ಲ. ಆತನು ಬ್ರಾಹ್ಮಣರಿಗೆ ವಿರುದ್ಧವಾದ ಶ್ಲೋಕಗಳಿಂದ ಭಗವದ್ಗೀತೆಯನ್ನು ಹೇಳಿದ್ದಾನೆ.

ಈ ದಿನ ಬ್ರಾಹ್ಮಣರಾದ ಸ್ವಾಮಿಜೀಗಳು ಎಷ್ಟೋಜನ ಭಗವದ್ಗೀತೆಯನ್ನು ಬೋಧಿಸುತ್ತಿದ್ದಾರೆ ಎನ್ನುವುದು ವಾಸ್ತವವೇ. ಆದರೇ ಅವರಿಗೆ ಭಗವದ್ಗೀತೆ ಮೇಲಿನ ಪ್ರೇಮದಿಂದಲೋ, ಭಕ್ತಿಯಿಂದಲೋ ಅವರು ಉಪನ್ಯಾಸಗಳಾಗಿ ಬೋಧಿಸುತ್ತಿಲ್ಲ. ಭಗವದ್ಗೀತೆ ಶ್ಲೋಕಗಳಲ್ಲಿನ ವಿವರ ಇತರರಿಗೆ ತಿಳಿಯ ಬಾರದೆಂದು, ಆ ಶ್ಲೋಕಗಳನ್ನು ಅವರೇ ಹೇಳಿ ಅದರ ಅಸಲು ಭಾವವನ್ನು ಅಲ್ಲದೆ ಬೇರೆ ಭಾವನೆಯನ್ನು ಹೇಳಬೇಕೆನ್ನುವ ಉದ್ದೇಶದಿಂದ ಹೇಳುತ್ತಿದ್ದಾರೆ. ಹಾಗೆ ಬೇರೆ ಭಾವನೆಯನ್ನು ಬದಲಿಸಿ ಹೇಳುವುದರಿಂದ ಅಸಲು ಕೃಷ್ಣನು ಹೇಳಿದ ಸತ್ಯದ ಮೇಲೆ ಯಾರ ಧ್ಯಾಸ ಹೋಗುವುದಿಲ್ಲ, ಅದರ ಅಸಲು ಅರ್ಥ ತಿಳಿಯುವುದಿಲ್ಲ. ಹಾಗೆ ಎಷ್ಟೋ ಶ್ಲೋಕಗಳನ್ನು ಮುಚ್ಚಿ ಹೇಳಿರುವವು ಇವೆ. ಉದಾಹರಣೆಗೆ **"ಚಾತುರ್ವರ್ಣ್ಯಂ"** ಶ್ಲೋಕದಲ್ಲಿನ ಅಸಲು ಭಾವನೆಯನ್ನು ಮುಚ್ಚಿಟ್ಟು, ಸಂಬಂಧವಿಲ್ಲದ ಭಾವವನ್ನು ಹೇಳಿದ್ದಾರೆ, ಹೇಳುತ್ತಲೇ ಇದ್ದಾರೆ. ವಿಶ್ವರೂಪ ಸಂದರ್ಶನ ಯೋಗದಲ್ಲಿ 48, 53 ಶ್ಲೋಕಗಳನ್ನು ಮುಚ್ಚಿಟ್ಟು ತಪ್ಪು ಭಾವನೆಗಳನ್ನೇ ಪ್ರಚಾರ ಮಾಡಿದ್ದಾರೆ. ಹಾಗೆ ತಾವೇ ಮೊದಲು ಹೇಳುವುದಕ್ಕೆ ಗೀತಾ ಯಜ್ಞಗಳೆನ್ನುವ ಹೆಸರಿನಿಂದ ಬೋಧನೆಗಳು ಹೇಳುತ್ತಿದ್ದಾರೆ. ಹಾಗೆ ಹೇಳುವುದೇ ಕರ್ತವ್ಯವಾಗಿ ಇಟ್ಟುಕೊಂಡಿದ್ದಾರೆ.

ಈ ದಿನ ಭಗವದ್ಗೀತೆಯನ್ನು ಸಾವಿರ ಪುಟಗಳಾಗಿ ಬರೆದವರು ಅವರೇ, ಎರಡು ಸಾವಿರ ಪುಟಗಳಾಗಿ ಬರೆದವರು ಅವರೇ. ಎಲ್ಲಿ ಬರೆದರೂ ಅದರಲ್ಲಿ ತಪ್ಪು ಭಾವನೆಗಳು ಹೊರತು ಬೇರೆ ಏನು ಇಲ್ಲ. ಅಷ್ಟೇಅಲ್ಲದೆ ಅದರಲ್ಲಿ ಕಲ್ಪಿತ ಶ್ಲೋಕಗಳು ಕೂಡಾ ಹೊರಗೆ ತಿಳಿಯದಂತೆ ಇರುವುದಕ್ಕೆ ಅವರೇ ಭಗವದ್ಗೀತೆಯನ್ನು ಹೇಳುತ್ತಿದ್ದಾರೆ. ಅವರು ಭಗವದ್ಗೀತೆಯನ್ನು ಹೇಳುವುದರಿಂದ ಪ್ರಜೆಗಳಿಗೆ ನಷ್ಟವೇ ಹೊರತು, ಲಾಭವು ಏನೂ ಇಲ್ಲವೆಂದು ಯಾರಿಗೂ ತಿಳಿಯದಂತೆ ಹೇಳುತ್ತಾ, ಹೇಳಿದ್ದಕ್ಕೆ ಪಾರಿತೋಷಕವಾಗಿ ಎರಡು ಮೂರು ಲಕ್ಷಗಳು ಬೆಲೆ ಇಟ್ಟು ತೆಗೆದುಕೊಳ್ಳುತ್ತಿದ್ದಾರೆ. ಕೃಷ್ಣನು ಭಗವದ್ಗೀತೆಯನ್ನು ಹೇಳಿ ಬ್ರಾಹ್ಮಣರಿಗೆ ವಿರೋಧಿಯಾಗಿದ್ದಾನೆ. ಅದೇ ರಾಮನಾದರೆ ಅವರನ್ನು ಕುರಿತು ಏನು ಹೇಳಲಿಲ್ಲ. ಆದ್ದರಿಂದ ರಾಮನನ್ನು ದೊಡ್ಡದಾಗಿ ಹೇಳುತ್ತಾ, ರಾಮನ ಮುಂದೆ ಕೃಷ್ಣನನ್ನು ಕಡಿಮೆಮಾಡಿ ಹೇಳುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ಬ್ರಾಹ್ಮಣ ಸ್ವಾಮಿಜೀ ಪ್ರವಚನಗಳು ಹೇಳುವುದರಲ್ಲಿ ದೊಡ್ಡ ಹೆಸರುವಾಸಿ ಯಾದವನು ಕೃಷ್ಣನನ್ನು ಕುರಿತು ಹೇಳುತ್ತಾ ರಾಮನು ದೊಡ್ಡ ರಾಜರ ಮನೆಯಲ್ಲಿ ಹುಟ್ಟಿದ್ದಾನೆ. ಕೃಷ್ಣನು ತಲೆತೊಳೆದರೆ ಮಲತೊಳೆಯದ, ಮಲತೊಳೆದರೆ ತಲೆತೊಳೆಯದ ಯಾದವರ ಮನೆಯಲ್ಲಿ ಹುಟ್ಟಿದ್ದಾನೆಂದು, ಯಾದವರನ್ನು ಒಂದುಕಡೆ ಅವಹೇಳನ ಮಾಡುತ್ತಾ ಅಂತಹವರ ಮನೆಯಲ್ಲಿ ಹುಟ್ಟಿದ್ದಾನೆಂದು ಕೃಷ್ಣನನ್ನು ಕೂಡಾ ಅವಹೇಳನ ಮಾಡಿದಂತೆ ಹೇಳಿದ್ದಾನೆ. ವಾಸ್ತವಕ್ಕೆ ಕೃಷ್ಣನು ಕ್ಷತ್ರಿಯರ ಮನೆಯಲ್ಲಿ ಹುಟ್ಟಿದ್ದಾನೆ. ಗೊಲ್ಲರ ಮನೆಯಲ್ಲಿ ಕೃಷ್ಣನು ಹುಟ್ಟಲಿಲ್ಲವೆಂದು ಆತನಿಗೂ ಕೂಡಾ ತಿಳಿದಿದೆ, ಆದರೂ ಅದೇ ಕೆಲಸವಾಗಿ ಆತನು ಹಾಗೆ ಹೇಳಿದ್ದಾನೆ. ಯಾದವರ ಮನೆಯಲ್ಲಿ ಹುಟ್ಟಿದ್ದಾನೆಂದು ಸ್ವಾಮಿಜೀಗಳೆಲ್ಲರೂ ಹೇಳುತ್ತಿದ್ದಾರೆ. ಎಲ್ಲರಿಗೂ ಆತನು ಯಾದವರ ಮನೆಯಲ್ಲಿ ಹುಟ್ಟಲಿಲ್ಲವೆಂದು ತಿಳಿದಿದೆ. ಯಾದವರ ಮನೆಯಲ್ಲಿ ಬೆಳೆದ ಮಾತು ವಾಸ್ತವ. ಹುಟ್ಟಿರುವುದು ಅವಾಸ್ತವ. ಇನ್ನೊಂದು ಏನೆಂದರೇ ಯಾದವರು ಯಾವಾಗಲೂ ಕುರಿಗಳನ್ನು ಕಾಯಲಿಲ್ಲ. ಅವರು ಹಸುಗಳನ್ನು ಕಾಯುವುದು ನಡೆದಿದೆ. ಆ ದಿನ ರೇಪಲ್ಲೆಯಲ್ಲಿ

ಗೋ ಸಂತತಿ ಹೆಚ್ಚಾಗಿದ್ದು ಪಾಡಿ ಪರಿಶ್ರಮ ಹೆಚ್ಚಾಗಿರುತ್ತಿತ್ತು. ಹಸುವಿನ ಹಾಲು, ಮೊಸರು, ಬೆಣ್ಣೆ, ತುಪ್ಪ ಸಮೃದ್ಧಿಯಾಗಿ ಇರುತ್ತಿದ್ದವು.

ಕುರಿಗಳನ್ನು ಕಾಯುವವರು ಕುರುಬರು. ಯಾದವರು ಗೋವುಗಳನ್ನು ಕಾದಿದ್ದಾರೆ. ಆದ್ದರಿಂದ ಅವರನ್ನು ಗೋಪಾಲರು ಎಂದು ಹೇಳುತ್ತಿದ್ದರು. ಗೋಪಾಲರು ಎಂದರೇ ಗೋವುಗಳನ್ನು ಪಾಲಿಸುವವರು ಅಥವಾ ಗೋವುಗಳನ್ನು ಕಾಯುವವರೆಂದು ಅರ್ಥ. ಆದರೂ ಕೃಷ್ಣನು ಗೋಪಾಲರ ಮನೆಯಲ್ಲಿ ಬೆಳೆದು ಆತನು ಕೂಡಾ ಗೋಪಾಲನು ಆಗಿದ್ದಾನೆ. ಅಷ್ಟೇ ಹೊರತು ಆತನಾಗಲಿ, ರೇಪಲ್ಲೆ ವಾಸಿಗಳಾಗಲಿ ಕುರಿಗಳನ್ನು ಕಾಯಲಿಲ್ಲ. ಈ ದಿನ ನಾವು **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯನ್ನು ಬರೆಯುವುದರಿಂದ ಭಗವದ್ಗೀತೆ ಅಸಲು ರಹಸ್ಯ ಹೊರಬಿದ್ದಿದೆ. ಆದರೆ ನಾವು ಬ್ರಾಹ್ಮಣಕುಲದವನು ಅಲ್ಲದಿರುವುದರಿಂದ, ಕಮ್ಮ (ಚೌದರಿ) ಕುಲದಲ್ಲಿ ಹುಟ್ಟಿದವನಾದ್ದರಿಂದ ಅವರ ವಿವಕ್ಷ ಈ ದಿನ ನನ್ನಮೇಲೆ ತೋರಿಸಲು ಆರಂಭಿಸಿದ್ದಾರೆ. ಈ ದಿನ ಮತ ರಕ್ಷಣೆ ಎಂದು ಸಂಸ್ಥೆಗಳು ಸ್ಥಾಪಿಸಿ ಅದರಲ್ಲಿ ಬ್ರಾಹ್ಮಣರೇ ಆಗ್ರವಾಗಿದ್ದು ಅವರ ಮಾತನ್ನೇ ನಡೆಯುವಂತೆ ಮಾಡುತ್ತಿದ್ದಾರೆ. ಹೊರಗೆ ಕಾಣಿಸದಂತೆ ಗುಂಪಿನಲ್ಲಿ ಗೋವಿಂದ ಎನ್ನುವಂತೆ ಜಾಣ್ಮೆಯಿಂದ ತಮಗೆ ವಿರುದ್ಧವಾಗಿರುವ ಅವರ ಮೇಲಾಗಲಿ, ಇತರೆ ಕುಲಗಳಲ್ಲಿನ ಸ್ವಾಮಿಜೀಗಳ ಮೇಲಾಗಲಿ ದ್ವೇಷ ಸಾಗಿಸುವುದಕ್ಕೆ ಅವರನ್ನು ಅಡಗಿಸಿ ಹಾಕುವುದಕ್ಕೆ ಹಿಂದೂ ರಕ್ಷಣೆ ಸಂಸ್ಥೆಗಳು ಚೆನ್ನಾಗಿ ಉಪಯೋಗ ಪಡುತ್ತಿವೆ. ಹಿಂದೂ ಮತ ರಕ್ಷಣೆ ಸಂಸ್ಥೆಗಳಲ್ಲಿ ಎಲ್ಲಾ ಕುಲದವರಿದ್ದರೂ ಅದರಲ್ಲಿ ಬ್ರಾಹ್ಮಣರದ್ದೇ ಮೇಲ್ಗೈ. ಅವರು ಹೇಳಿದಂತೆ ಉಳಿದವರೆಲ್ಲರೂ ಕೇಳುವಂತೆ ಮಾಡಿಕೊಂಡಿದ್ದಾರೆ. ನಾವು ದೇಶಕ್ಕಾಗಿ ಕೆಲಸ ಮಾಡುತ್ತಿದ್ದೇವೆ, ಎರಡನೆಯದು ಮತ ರಕ್ಷಣೆಗಾಗಿ ಕೆಲಸ ಮಾಡುತ್ತಿದ್ದೇವೆಂದು ಎಲ್ಲರಿಗೂ ಬೋಧಿಸುತ್ತಿದ್ದಾರೆ. ದೇಶಭಕ್ತಿ ಮತಭಕ್ತಿಯನ್ನು ತಿಳಿಸುತ್ತಾ, ಮತ ರಕ್ಷಣೆಯೇ ನಮ್ಮ ಧ್ಯೇಯವೆಂದು ಹೇಳುತ್ತಾ, ಇತರೆ ಮತಗಳನ್ನು ಅಡಗಿಸಿ

ಹಾಕುತ್ತಾ, ಹಿಂದೂಮತವನ್ನು ಅಭಿವೃದ್ಧಿ ಮಾಡಬೇಕೆನ್ನುವುದೇ ಧ್ಯೇಯವಾಗಿ ಇಟ್ಟುಕೊಂಡಿದ್ದಾರೆ.

ಎಲ್ಲಿಯಾದರೂ ಬ್ರಾಹ್ಮಣೇತರ ಕುಲದವರು ಹಿಂದೂ ಜ್ಞಾನವನ್ನು ಬೋಧಿಸುತ್ತಿದ್ದರೂ, ಭಗವದ್ಗೀತೆಯನ್ನು ಹೇಳುತ್ತಿದ್ದರೂ ಅವರನ್ನು ಪರಮತ ಪ್ರಚಾರಕರಾಗಿ ಚಿತ್ರಿಸಿ, ಅವರ ಮೇಲೆ ಸಂಘದಲ್ಲಿನ ಉಳಿದ ಕುಲದವರೆಲ್ಲರನ್ನು ದಾಳಿಗೆ ಕಳುಹಿಸಿ ಮೇಲೆ ನೋಡುತ್ತಿರುತ್ತಾರೆ. ಹಿಂದೂಮತ ರಕ್ಷಣೆ ಸಂಸ್ಥೆಯಲ್ಲಿನ ವರಿಗೆ ಸ್ವಲ್ಪವಾದರೂ ಹಿಂದೂ ಜ್ಞಾನ ತಿಳಿದಿಲ್ಲ. ಆಗ ತಮ್ಮ ಹಿರಿಯರು ಏನು ಹೇಳಿದರೆ ಅದೇ ಸತ್ಯವೆಂದು ನಂಬುವವರು ಇರುವುದರಿಂದ ಯಾರಾದರೂ ಬ್ರಾಹ್ಮಣೇತರ ಸ್ವಾಮಿ, ಗುರು ಕಾಣಿಸಿದರೆ ಅವರು ಹಿಂದೂ ಸಮಾಜದ ಹೆಸರಿನಿಂದ ಹಿಂದೂ ಮುಸುಗಿನಲ್ಲಿ ಪರಮತವನ್ನು ಬೋಧಿಸುತ್ತಿದ್ದಾರೆಂದು ಆ ಸಂಘದಲ್ಲಿರುವ ಬ್ರಾಹ್ಮಣನು ಒಬ್ಬನು ಹೇಳಿದರೆ ಉಳಿದ ಕುಲದವರೆಲ್ಲರೂ ಅ ಸಂಘದಲ್ಲಿದ್ದರೂ, ಇದು ಕುಲವಿವಕ್ಷದಿಂದ ಹೇಳುವುದೆಂದು ತಿಳಿಯದೆ ಹಿಂದೂಗಳಾಗಿರುವವರು ಹಿಂದೂಗಳ ಮೇಲೆಯೇ ದಾಳಿ ಮಾಡುತ್ತಿದ್ದಾರೆ. ಇದೆಲ್ಲವೂ ಪ್ರತ್ಯಕ್ಷವಾಗಿ ನಮ್ಮ ವಿಷಯದಲ್ಲಿಯೇ ನಡೆದಿದೆ. ನಡೆಯುತ್ತಲೇ ಇದೆ. ನಾವು ತ್ರೈತ ಸಿದ್ಧಾಂತವನ್ನು ಆಧಾರ ಮಾಡಿಕೊಂಡು ಭಗವದ್ಗೀತೆಯನ್ನು ಬರೆದರೆ ಅದನ್ನು ಹಿಂದೂ ಮುಸುಗಿನಲ್ಲಿರುವ ಬೈಬಲ್ ಆಗಿ ಚಿತ್ರಿಸಿ ಹೇಳಿದ್ದಾರೆ. ನಾವು ಹಿಂದೂ ಮುಸುಗಿನಲ್ಲಿರುವ ಪರಮತ ಪ್ರಚಾರಕರೆಂದು ಹೇಳಿದ್ದಾರೆ. ಹಿಂದೂಮತ ರಕ್ಷಣೆ ಸಂಘದಲ್ಲಿರುವ ಇತರೆ ಮತದವರು ಕೆಲವರು ಅವರ ಮೊಣಕ್ಕೈ ನೀರು ಕುಡಿಯುತ್ತಾ, ಅವರು ಹೇಳಿರುವುದೇ ಸತ್ಯವೆಂದು ತಿಳಿದು ಎದುರಿಗಿರುವವರು ಸಹ ಇಂದೂಗಳೇ ಎನ್ನುವ ಮಾತನ್ನು ಮರೆತು ಬ್ರಾಹ್ಮಣರು ಹೇಳಿದ ಮಾತಿನ ಪ್ರಕಾರ ದಾಳಿಗೆ ಇಳಿಯುತ್ತಿದ್ದಾರೆ. ಇದಕ್ಕೆಲ್ಲಾ ಕಾರಣ ಒಂದು ಕುಲವಿವಕ್ಷ ಎಂದು ಹೇಳದೆ ತಪ್ಪುವುದಿಲ್ಲ. ಹಿಂದೂಮತದಲ್ಲಿ ಬ್ರಾಹ್ಮಣರ ದೃಷ್ಟಿ ಕುಲವಿವಕ್ಷದಿಂದ ಇಲ್ಲಿಯವರೆಗು ಹಿಂದೂಮತ ಸೀಳಿಹೋಗಿ ಕ್ಷೀಣಿಸಿ ಹೋಗಿದೆ. ಇನ್ನು ನಂತರ ಕೂಡಾ ಬ್ರಾಹ್ಮಣರ ದೊಡ್ಡಸ್ತಿಕೆ ಇದ್ದರೆ ಹಿಂದೂಮತ

ಸರ್ವನಾಶ ಆಗಬಲ್ಲದು. ಹಿಂದೂಗಳು ಇನ್ನಾದರೂ ಎಚ್ಚರಗೊಂಡು ಹಿಂದೂ ಮತವನ್ನು ಕುಲವಿವಕ್ಷದಿಂದ ರಕ್ಷಿಸಿಕೊಳ್ಳಿರಿ. ಇತರೆ ಮತಗಳಿಂದ ಹಿಂದೂಗಳು ಮತಾಂತರ ಹೊಂದಲಿಲ್ಲ. ಹಿಂದೂಮತದಲ್ಲಿನ ಬ್ರಾಹ್ಮಣರ ವಿವಕ್ಷದಿಂದ, ಅಂಟಬಾರದ ತನವನ್ನು ಪ್ರದರ್ಶಿಸುವುದರಿಂದ, ಹಿಂದೂಗಳು ಅವಮಾನವನ್ನು ಹೊಂದಲಾರದೆ ಮತವನ್ನು ಬದಲಾಯಿಸಿಕೊಳ್ಳುತ್ತಿದ್ದಾರೆ. ಕುಲ ವಿವಕ್ಷ ಕಡಿಮೆಯಾದರೆ ಮತಾಂತರ ಕಡಿಮೆಯಾಗುತ್ತದೆ. ಕುಲ ವ್ಯವಸ್ಥೆಯನ್ನು ವಿರೋಧಿಸೋಣ. ಕುಲ ವಿವಕ್ಷವನ್ನು ರೂಪ ಬದಲಿಸೋಣ.

## ಸಮಾಪ್ತಿ

**ಅಸತ್ಯವನ್ನು ಸಾವಿರಜನ ಹೇಳಿದರೂ, ಅದು ಸತ್ಯ ಆಗುವುದಿಲ್ಲ.**
**ಸತ್ಯವನ್ನು ಸಾವಿರಜನ ಅಲ್ಲಗಳೆದರೂ, ಅದು ಅಸತ್ಯ ಆಗುವುದಿಲ್ಲ.**

**1. ತಿಳಿಯದ ಆಕಾಶ ಒಂದಾಗಿದ್ದು**
**ತಿಳಿಯುವ ಸೂರ್ಯ, ಚಂದ್ರ,**
**ನಕ್ಷತ್ರಗಳು ಮೂರು (ತ್ರೈತ) ಇವೆ.**

**2. ತಿಳಿಯದ ಕಾಲ ಒಂದಾಗಿದ್ದು**
**ತಿಳಿಯುವ ದಿನ, ಮಾಸ, ಸಂವತ್ಸರ**
**ಮೂರು (ತ್ರೈತ) ಇವೆ.**

**3. ತಿಳಿಯದ ಪರಮಾತ್ಮ ಒಂದಾಗಿದ್ದು**
**ತಿಳಿಯುವ ಅಂಡಜ, ಪಿಂಡಜ,**
**ಉದ್ಭಿಜ ಮೂರು (ತ್ರೈತ) ಇವೆ.**

# ಹಿಂದೂ ಮತದಲ್ಲಿ ಕುಲವಿವಕ್ಷ

## ಯೋಗೀಶ್ವರರವರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ಪ್ರಕಟನೆಗಳು

